# ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು

ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್) ಪದವಿಯ ಅವಶ್ಯಕತೆಗಾಗಿ
ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ



ಸಂಶೋಧಕಿ :
ಪ್ರತಿಮಾ ಎಂ.ಸಿ.



ಮಾರ್ಗದರ್ಶಕರು:
ಡಾ॥ ಡಿ.ಮಂಗಳಾ ಪ್ರಿಯದರ್ಶಿನಿ




ಕಾವ್ಯಮಂಡಲ
ಕನ್ನಡ ಸಂಸ್ಕೃತಿ ಅಧ್ಯಯನ ಕೇಂದ್ರ
ಬೆಂಗಳೂರು
2006–07

588

# ದೃಢೀಕರಣ ಪತ್ರ

ಪ್ರತಿಮಾ ಎಂ. ಸಿ. ಅವರು 'ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು' – ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.



ದಿನಾಂಕ : 6-8-2007
ಸ್ಥಳ : ಬೆಂಗಳೂರು

B. ಮಂಗಳ ಪ್ರಿಯದರ್ಶಿನಿ
(ಡಾ॥ಮಂಗಳಾ ಪ್ರಿಯದರ್ಶಿನಿ)
ಪ್ರಾಂಶುಪಾಲರು
ವಿದ್ಯಾ ವರ್ಧಕ ಸಂಘ
ಮಹಿಳಾ ಪ್ರಥಮ ದರ್ಜೆ ಕಾಲೇಜು
ಬಸವೇಶ್ವರನಗರ, ಬೆಂಗಳೂರು-560 079

588

## ಪ್ರಮಾಣ ಪತ್ರ

'ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು' – ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ॥ ಡಿ. ಮಂಗಳಾ ಪ್ರಿಯದರ್ಶಿನಿ ಅವರ ಮಾರ್ಗದರ್ಶನವನ್ನು ಪಡೆದು ಸಿದ್ಧಪಡಿಸಲಾಗಿದೆ.

ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಪ್ರತಿಮಾ ಎಂ. ಸಿ.)

ದಿನಾಂಕ : 7-8-2007
ಸ್ಥಳ : ಬೆಂಗಳೂರು

ಪರಿವಿಡಿ:

# ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು

**ಪ್ರವೇಶಿಕೆ :-**

"ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು" ಎನ್ನುವಲ್ಲಿ ಆ ಕಾಲಘಟ್ಟದ ಸಮಾಜವು ರೂಪಿಸಿದ್ದ ಹೆಣ್ಣಿನ ಸ್ವರೂಪ ಹಾಗೂ ಅವಳ ಮೇಲೆ ಹೇರಲಾಗಿದ್ದ ನಿಯಮಗಳ ಬಗೆಗಿನ ವಿರೋಧವು ಕಂಡು ಬರುತ್ತದೆ. ಜೊತೆಗಿಲ್ಲಿ ವಚನಕಾರ್ತಿಯರು ಭಕ್ತಿಯ ಸ್ವರೂಪ, ಕಾಯಕ ಹಾಗೂ ವೃತ್ತಿಪರಿಭಾಷೆಗೆ ನೀಡಿದ ಪ್ರತಿಕ್ರಿಯೆಯಲ್ಲಿನ ಪ್ರತಿರೋಧದ ನೆಲೆಗಳನ್ನು ಗುರುತಿಸಿ ತೋರಿಸುವುದರೊಂದಿಗೆ - ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಕೌಟುಂಬಿಕ ರಚನೆಗಳಲ್ಲಿ ಈ ಹಿಂದೆ ಇದ್ದ ತಪ್ಪುಗ್ರಹಿಕೆಗಳನ್ನು ವಿರೋಧಿಸಿದ ಸ್ವರೂಪವನ್ನಿಲ್ಲಿ ಕಾಣಬಹುದಾಗಿದೆ. ಹೀಗೆ ವಿರೋಧಿಸುವ ಸಂದರ್ಭದಲ್ಲೇ ಸಾಮಾಜಿಕ ನ್ಯಾಯ ಮಾನವೀಯ ನೆಲೆಯಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಗುರುತಿಸುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ಕನ್ನಡ ಸಾಹಿತ್ಯದಲ್ಲಿ ವಚನ ಸಂಸ್ಕೃತಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಮಹಿಳೆಯರ ಬಗೆಗೆ ವಚನಕಾರರು ತಳೆದ ವಿಶಿಷ್ಟ ಮನೋಧರ್ಮ ಆಶ್ಚರ್ಯವನ್ನು ಹುಟ್ಟಿಸುತ್ತದೆ. ಅವರು ಸ್ತ್ರೀಯರಿಗೆ ಹೊಸ ಬಗೆಯ ವ್ಯಕ್ತಿತ್ವವನ್ನು ಹಾಗೂ ಬದುಕನ್ನು ರೂಪಿಸಿಕೊಡಲು ಮುಂದಾದರು. ಹೀಗೆ ಹಳೆಯ ಸಮಾಜಿಕ ವ್ಯವಸ್ಥೆಯನ್ನು ಒಡೆದು ಸ್ತ್ರೀ ಪರವಾದ ಆಶಯವನ್ನು ಹೊತ್ತು ಹೋರಾಟ ನಡೆಸಿದ್ದು ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಹೋರಾಟದ ಹಲವು ನೆಲೆಗಳನ್ನು ವಚನಗಳ ನಿದರ್ಶನದಿಂದಲೇ ಗ್ರಹಿಸಬಹುದಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಹೆಣ್ಣಿನಸುತ್ತಲಿದ್ದ ಅಹಿತಕರ ವಾತಾವರಣದ ವಿರುದ್ಧ ಹೋರಾಟ ನಡೆಸುವಲ್ಲಿ ಮೇಲು-ಕೀಳೆಂದೆಣಿಸದೆ ಎಲ್ಲ ಸ್ಥರದಿಂದ ಬಂದ ಸ್ತ್ರೀಯರು ಸಮಾವೇಶಗೊಂಡರು. ಆ ಕಾರಣ ಕೆಳವರ್ಗ ವಚನಕಾರ್ತಿಯರು ದುಷ್ಟಶಕ್ತಿಗಳ ವಿರುದ್ಧ ಪ್ರತಿಭಟನೆ ನಡೆಸುವ ಸ್ವರೂಪವನ್ನು ಉಳಿದ ವಚನಕಾರ್ತಿಯರ ಪ್ರತಿಭಟನಾ ಮಾದರಿಯನ್ನು ಸೂಕ್ಷ್ಮವಾಗಿ ಗುರುತಿಸುವ ಅವಶ್ಯಕತೆಯಿದೆ.

ಸ್ತ್ರೀಯರು ಆ ಕಾಲಕ್ಕೆ ತಮಗಿದ್ದ ನಿರ್ಬಂಧನೆಗಳನ್ನು, ನಿಯಮಗಳನ್ನು ಮೀರಲು ಪ್ರಯತ್ನಿಸಿದರು. ತಾನು ಆರ್ಥಿಕವಾಗಿ ಸಬಲಳಾಗ ಬಯಸಿ ಉತ್ಪಾದಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದು, ಅವಳ ಭೌದ್ಧಿಕ ಹಾಗೂ ಭಾವನಾವಲಯಗಳನ್ನು ವಿಸ್ತರಿಸಿಕೊಂಡಿದ್ದು, ಸಾಮಾಜಿಕ ಸಂದರ್ಭದಲ್ಲಿ ಭಾಗವಹಿಸಿದ್ದು, ಧಾರ್ಮಿಕ ಕ್ರಿಯೆಯಲ್ಲಿ ಭಾಗವಹಿಸಿದ್ದು, ರಾಜಕೀಯದಲ್ಲಿ ನಿರ್ಲಿಪ್ತವಾಗಿದ್ದುಕೊಂಡೆ ಎಚ್ಚರವಹಿಸಿದ್ದು, ಕೌಟುಂಬಿಕ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿದ್ದುಕೊಂಡೆ ಮೀರಿನಿಲ್ಲುವಲ್ಲಿ ಸೃಜನಶೀಲಳಾಗಿ ಹೊಸಬಗೆಯ ವ್ಯಕ್ತಿತ್ವವನ್ನು ಕಂಡುಕಳ್ಳುವಲ್ಲಿ ಯಶಸ್ವಿಯಾದಳು. ಹೀಗೆ ಹೊಸತನವನ್ನು ಹೊಂದುತ್ತಿದ್ದ ಸಂದರ್ಭದಲ್ಲಿ ವಚನಕಾರ್ತಿಯರು ತಳೆದ ಪ್ರತಿರೋಧದ ಸ್ವರೂಪವನ್ನಿಲ್ಲಿ ವಚನಗಳ ಹಿನ್ನೆಲೆಯಲ್ಲಿಯೇ ಕಂಡುಕೊಳ್ಳಲು ಪ್ರಯತ್ನಿಸಿದೆ.

ಹನ್ನೆರಡನೆಯ ಶತಮಾನದಲ್ಲಿ ವಚನಕಾರ್ತಿಯರು ಯಾವುದೇ ವಿಚಾರದಲ್ಲೂ, ಅಂತರಂಗ-ಬಹಿರಂಗ, ನೇರ-ನಡೆನುಡಿಗಳಲ್ಲಿ ಇಬ್ಬಂದಿತನವನ್ನು ತೋರಿಲ್ಲ, ಇದ್ದುದನ್ನು ಇದ್ದ ಹಾಗೆ ಹೇಳುವ ಸತ್ಯವನ್ನು ಒಪ್ಪಿಕೊಳ್ಳುವ, ಮೌಢ್ಯವನ್ನು ಖಂಡಿಸುವ, ಪ್ರಾಮಾಣಿಕ

ಬದುಕಿನ ಕಾಯಕ ಮಹತ್ವ ಅವರಲ್ಲಿ ನೈಜವಾಗಿತ್ತು. ಹೀಗೆ ಈ ಇಂತು ವಿಷಯಗಳಿಗೆ ಒತ್ತನ್ನು ಕೊಟ್ಟು ಪುನಃ ಹೊಸಬಗೆಯ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಸಂಪ್ರಬಂಧದಲ್ಲಿ ಪ್ರಾತಿನಿಧಿಕ ವಾಗಿ ವಚನಕಾರ್ತಿಯರನ್ನು ಹಾಗೂ ಅವರ ವಚನಗಳನ್ನು ಆಯ್ದುಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹನ್ನೆರಡನೆಯ ಶತಮಾನವು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹಲವು ಹೊಸ ವಿಚಾರಗ ಳನ್ನು ಬೆಳೆಸಿದೆ. ಇಂತಹ ವಿಚಾರ ಸರಮಾಲೆಯಲ್ಲಿ ಸ್ತ್ರೀಯರು ತಮಗಿದ್ದ ಪೂರ್ವಾಗ್ರಹಿತ ನಿಯ ಮಗಳನ್ನು ಮೀರಿ ವಚನ ಚಳುವಳಿಯಲ್ಲಿ ಭಾಗವಹಿಸಿದ ಕಾರಣ ಪರಡಿದ ಚಿಂತನೆಗಳು ಅರ್ಥಪೂರ್ಣವಾಗಿಯೇ ಇದೆ. ಈ ಹಿನ್ನೆಲೆಯ ಚಿಂತನೆಗಳ ತಳಹದಿಯ ಮೇಲೆ ಉಂಟಾದ ಪ್ರತಿ ಭಟನಾತ್ಮಕ ಸ್ತ್ರೀ ಜಾಗೃತಿಯ ನೆಲೆಯನ್ನು ಅಭ್ಯಾಸ ಮಾಡುವುದು ಈ ಚಿಂತನ ಮಾಲೆಯ ಮುಖ್ಯ ಉದ್ದೇಶ.

"ಪ್ರತಿಭಟನೆ" ಎಂಬುದು ವಚನಕಾರ್ತಿಯರಲ್ಲಿ ಹಲವು ಸಂದರ್ಭಗಳಲ್ಲಿ, ಹಲವಾರು ರೀತಿಯಲ್ಲಿ ವ್ಯಕ್ತವಾಗಿದೆ. ಅಂದರೆ ಅವರ ಪ್ರತಿಭಟನೆಯ ಸ್ವರೂಪವು ಕೆಲವು ಸಂದರ್ಭಗಳಲ್ಲಿ ನೇರ ಹಾಗೂ ಸ್ಪಷ್ಟವಾಗಿ ಬಂಡಾಯದ ನೆಲೆಗಟ್ಟನೊಂದಿಗೆ ಕಂಡುಬಂದರೆ, ಮತ್ತೆ ಕೆಲವು ಸಂದರ್ಭಗಳಲ್ಲಿ ಅಗೋಚರ, ಅಸ್ಪಷ್ಟ ಹಾಗೂ ಅಮೂರ್ತವಾಗಿ ಪ್ರಕಟಿತವಾಗಿರುವುದನ್ನು ಗುರು ತಿಸಬಹುದು.

ಇಲ್ಲಿಯೇ ಇನ್ನೊಂದು ಅಂಶವನ್ನು ಗಮನಿಸಬೇಕಾಗುತ್ತದೆ- ಪ್ರತಿಭಟನೆ ಎಂದರೆ ಎಲ್ಲ ವನ್ನೂ ವಿರೋಧಿಸುವುದು ಅಥವಾ ತಿರಸ್ಕರಿಸುವುದು ಎಂದಾಗದೆ ಆ ಸಂದಿಗ್ಧ ಸ್ಥಿತಿಯಲ್ಲಿನ ಅವಳ ಪ್ರತಿರೋಧದ ಪ್ರತಿಕ್ರಿಯೆಗಳನ್ನು ಹಂತಹಂತವಾಗಿ ವಿವರಿಸುವುದಾಗಿದೆ. ಅದರಲ್ಲೂ ಯಾವು ದನ್ನು? ಯಾವ ಕಾರಣಕ್ಕಾಗಿ? ಹೇಗೆ? ನಿರಾಕರಿಸಿದರು ಅಥವಾ ವಿರೋಧಿಸಿದ ರೆಂಬುದು ಮುಖ್ಯವಾಗುತ್ತದೆ. ಸೂಕ್ಷ್ಮವಾಗಿ ಗಮನಿಸಿದಾಗ ವಚನಕಾರ್ತಿಯರಲ್ಲಿ ಒಳಿತನ್ನು ಹೇಳುವ ಸಂದರ್ಭದಲ್ಲಿ ಕೆಡುಕಿನ, ನೀತಿಯ ಹೇಳುವಲ್ಲಿ ಅನೀತಿಯ, ಆಚಾರವ ಹೇಳುವಾಗ ಅನಾಚಾ ರದ ಬಗೆಗೆ ವಿರೋಧವಿರುವ ಜಾಗೃತ ಮನಸ್ಸನ್ನು ಗುರುತಿಸಬಹುದಾಗಿದೆ.

ವಚನಕಾರ್ತಿಯರಲ್ಲಿ ಪ್ರತಿರೋಧವು ಅವರ ಬದುಕಿನ ಸಕಲ ಸಂದರ್ಭಗಳಲ್ಲಿ ಗೋಚ ರವಾಗಿದೆ. ಹಾಗೆ ಪ್ರತಿರೋಧ ವ್ಯಕ್ತಪಡಿಸುವಂತೆಯೇ ತಾತ್ವಿಕ ತೀರ್ಮಾನಗಳನ್ನು ಕೈಗೊಳ್ಳುವಮ ಟ್ಟಿಗೆ ತನ್ನ ವ್ಯಕ್ತಿತ್ವವನ್ನು ವಿಸ್ತರಿಸಿಕೊಂಡು, ಮಾರ್ಗದರ್ಶನ ನೀಡಿದ್ದು ಸಂತಸವನ್ನು ತರುತ್ತದೆ. ಹಾಗೆ ನೋಡಿದರೆ, ಆ ಕಾಲಕ್ಕೆ ಸ್ತ್ರೀಯರು ವ್ಯವಸ್ಥೆಯ ವಿರುದ್ಧ ಮಾತನಾಡಲು ಆರಂಭಿಸಿದ್ದೆ ಬೆರ ಗನ್ನು ಉಂಟು ಮಾಡಿತ್ತು.

ಬದುಕು ಸುಖ ದುಃಖಗಳ ಪಯಣವಾಗಿದ್ದು ನಿತ್ಯಬದಲಾವಣೆ ಹೊಂದುತ್ತಾ ಪ್ರಗತಿಯ ಮಾರ್ಗವನ್ನು ಕ್ರಮಿಸುವಂತಹುದು ಎಂಬ ಮಾತಿಗೆ ಸ್ತ್ರೀಯರೇನು ಹೊರತಾಗಿಲ್ಲ. ವಚನ ಕಾರ್ತಿಯರು ವಿಕಾಸದ ಮಾರ್ಗಲ್ಲಿ ಸಾಗಿ ತಮ್ಮ ಬದುಕಿನ ಘಟನೆಗಳೊಂದಿಗೆ ತಾವು ಕಂಡುಂಡ ಬದುಕಿನಲ್ಲಿನ ವೈಪರಿತ್ಯಗಳನ್ನು ಎತ್ತಿ ಹೇಳಿ ಮುಕ್ತವಾಗಿ ಸಮಾಲೋಚನೆ ನಡೆಸಿ ಉತ್ಕೃಷ್ಟ ಸಾಹಿತ್ಯ ರಚನೆ ಮಾಡಿರುವುದನ್ನು ಕಾಣಬಹುದು. ಕ್ಷಣಿಕವಾದ, ನಶ್ವರವಾಗುವ ಲೌಕಿಕ ಜೀವನವನ್ನೇ

ಪ್ರಧಾನವೆನ್ನುವ ಭಾವವನ್ನು ನಿರಾಕರಿಸಿ, ತಮಗಾಗುತ್ತಿದ್ದ ಅನ್ಯಾಯವನ್ನು ಅರ್ಥಮಾಡಿಕೊಂಡು ಸ್ತ್ರೀಯರು ಸಹಜವಾಗಿ ಅಭಿವ್ಯಕ್ತಗೊಳಿಸಿದ್ದೇ ಒಂದು ಬಗೆಯ ಅವಳ ಅರಿವಿನ ಹೋರಾಟವಾಗಿದೆ.

ವಿದ್ಯಾಭ್ಯಾಸ ಹಾಗೂ ಪಾಂಡಿತ್ಯವೆರಡೂ ಇಲ್ಲದ ಸ್ತ್ರೀಯರಿಗೆ ಅನುಭವ ಮಂಟಪದಲ್ಲಿ ದೊರೆತ ಸಮಾನತೆ ಮತ್ತು ಸ್ವಾತಂತ್ರ್ಯಗಳು ವಚನಕಾರ್ತಿಯರಿಗೆ ಸ್ಫೂರ್ತಿದಾಯಕವಾಗಿ ಪರಿಣಮಿಸಿತು. ಆ ಮೂಲಕ ತಮ್ಮ ಸಮಕಾಲೀನ ಸಮಾಜದ ಮೌಢ್ಯಗಳ ವಿರುದ್ಧ ದನಿ ಎತ್ತಿ ಪ್ರತಿಭಟಿಸಲು ಸೂಕ್ತ ಅವಕಾಶ ಒದಗಿ ಬಂತು. ಹೀಗೆ ತಮಗೊದಗಿದ ಅವಕಾಶದ ಫಲಶೃತಿಯೆಂಬಂತೆ ಕೆಲವು ವಚನಕಾರ್ತಿಯರು ಮೂಢನಂಬಿಕೆ, ನಂಬಿಕೆ, ನಿಷೇಧ ಹಾಗೂ ಕೆಲ ಪುರುಷ ಪ್ರಧಾನ ಅವೈಜ್ಞಾನಿಕ ಅಸ್ತಿತ್ವಗಳ ವಿರುದ್ಧವೂ ಮಾತನಾಡಲು ಮುಂದಾದರು. ಯಾರೇ ತಪ್ಪು ಮಾಡಿದರೂ, ಎಲ್ಲೇ ಅನ್ಯಾಯ ಕಂಡುಬಂದರೂ ಸಹ ಅದನ್ನು ಪ್ರತಿಭಟಿಸಿ, ಬುದ್ಧಿ ಹೇಳಿ ತಪ್ಪನ್ನು ತಿದ್ದುವ ಅನ್ಯಾಯವನ್ನು ಖಂಡಿಸುವ ಮಟ್ಟಕ್ಕೆ ವಚನಕಾರ್ತಿಯರು ಬೆಳೆದರು.

ಹೀಗೆ ಅಸ್ತವ್ಯಸ್ತಗೊಂಡಿದ್ದ ಸ್ತ್ರೀಯರ ಪರಿಸ್ಥಿತಿ ವಚನ ಚಳುವಳಿಯ ಸಂದರ್ಭದಲ್ಲಿ ಹೋರಾಟದ ಹಂತಕ್ಕೆ ತಲುಪಿದ ಪ್ರಕ್ರಿಯೆಗಳನ್ನು ಹಾಗೂ ಈ ನಿಟ್ಟಿನಲ್ಲಿ ಸ್ತ್ರೀಯರ ಸುತ್ತ ರೂಪುಗೊಂಡ ಹೊಸ ಬಗೆಯ ವಾತಾವರಣವನ್ನು ವಚನಗಳ ಮುಖಾಂತರ ಸಂಗ್ರಹಿಸಿ ಕೊಡುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

# ಅಧ್ಯಾಯ – 1

## ಹನ್ನೆರಡನೆ ಶತಮಾನದ ವಚನಕಾರ್ತಿಯರು ಹಾಗು ಅವರ ವಚನಗಳ ಸಾಂಸ್ಕೃತಿಕ ಶೋಧ ಪ್ರತಿಭಟನೆಯ ಸ್ವರೂಪದ ಹಿನ್ನೆಲೆಯಲ್ಲಿಯಾಗಿದೆ:-

ಭಕ್ತಿಯ ಅಸ್ತಿತ್ವದ ಸ್ವರೂಪ ಹಾಗೂ ಭಕ್ತಿಯ ಸ್ವರೂಪವನ್ನು ಕುರಿತ ವಚನಕಾರರ ಚಿಂತನೆಗಳು

'ಭಕ್ತಿ' ಶಬ್ದದ ಅರ್ಥವನ್ನು ಸ್ಥೂಲವಾಗಿ ಮೋಕ್ಷ ಸಾಧನೆಗಾಗಿ ದೇವರನ್ನು ಆರಾಧಿಸುವ ಬಗೆ ಎನ್ನಬಹುದಾಗಿದೆ. ಅಲ್ಲದೆ 'ಭಕ್ತಿ' ಎಂಬುದು ತಾನು ನಂಬಿದ ದೇವರ ಬಗೆಗಿನ ಗೌರವ, ಮರ್ಯಾದೆ, ಮನ್ನಣೆ, ಪೂಜೆ, ಅರ್ಚನೆ, ಆರಾಧನೆಯಾಗಿದೆ.

ವಿಶಾಲ ಅರ್ಥದಲ್ಲಿ 'ಭಕ್ತಿ' ಯ ಗ್ರಹಿಕೆ, ಸಕಲ ವಿಚಾರಗಳಲ್ಲೂ ಶ್ರದ್ಧೆನಿಷ್ಠೆಯಿಂದಿರುವುದು, ಅರ್ಪಿಸುವಿಕೆ, ವಿನಿಯೋಗಿಸು, ಮನಃಪೂರ್ವಕ ಉಪಾಸನೆ, ಅನುರಕ್ತಿ ಹೊಂದು, ಧರ್ಮನಿಷ್ಠೆಪಾಲಿಸು, ಶುದ್ಧಾಂತಃಕರಣ ಹೊಂದು ಎಂದಾಗುತ್ತದೆ.

ಭಾರತದಲ್ಲಿ 'ಭಕ್ತಿ'ಯ ಪರಿಕಲ್ಪನೆ ವೇದ ಹಾಗೂ ಪುರಾಣ ಕಾಲದಿಂದಲೆ ವಿಪುಲವಾಗಿರುವುದು ತಿಳಿದುಬರುತ್ತದೆ. ಬಹುಹಿಂದಿನಿಂದಲು ಭಕ್ತಿಯ ಆಚರಣೆ, ಪ್ರಾರ್ಥನೆ, ಪೂಜೆ, ಯಾತ್ರೆ, ಧ್ಯಾನ, ಸನ್ಯಾಸ, ಸಾಮಾಜಿಕ ಸೇವೆ, ಆಧ್ಯಾತ್ಮಿಕತೆಗಳ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ[1] ಎನ್ನುವ ಮಾತು ಸರಿಯಾಗಿಯೇ ಇದೆ.

ಹೀಗೆ 'ಭಕ್ತಿ'ಯು ಪ್ರಾಚೀನಕಾಲದಿಂದಲೂ ಮನುಷ್ಯ ಜೀವನದಲ್ಲಿ ಹಾಸುಹೊಕ್ಕಾಗಿದ್ದು ಮೇಲು-ಕೀಳು, ಉಚ್ಚ ನೀಚ, ಜಾತಿ-ಮತಗಳ ನಿರ್ಬಂಧವಿಲ್ಲದೆ ಸಾಗಿಬಂದಿದೆ. ಆಕಾರಣ ಭಕ್ತಿಯ ಮಾರ್ಗವನ್ನು ಯಾರಾದರೂ ತಮ್ಮ ಅನುಕೂಲ, ಅವಕಾಶ, ಸಾಧ್ಯತೆ, ಜ್ಞಾನ, ತಿಳುವಳಿಕೆಯ ಅನುಸಾರ ಕ್ರಮಿಸಬಹುದಾಗಿದೆ.

ಸ್ವಾಮಿ ವಿವೇಕಾನಂದರು ಭಕ್ತಿಯನ್ನು ಸಕಲ ಕಾರ್ಯಕ್ಕೂ ಅನ್ವಯವಾಗುವ ಒಂದು ಸಾಮಾನ್ಯ ನಿಯಮವೆಂದರೆ ಪ್ರೀತಿ-ಸಹಾನುಭೂತಿ ಎಂದು "ಏಕಮಾತ್ರ ಉಪಾಯವೆಂದರೆ ಪ್ರೀತಿ ಮತ್ತು ಸಹಾನುಭೂತಿ, ಏಕಮಾತ್ರ ಪೂಜೆಯೆಂದರೆ ಪ್ರೀತಿ"[2] ಎಂದು ಹೇಳಿದ್ದಾರೆ.

ಒಟ್ಟಿನಲ್ಲಿ ಭಕ್ತಿ ಎಂಬುದು "The feeling or expression of deep respect and adoration for a god or godess".[3]

ಎಂದರೆ ಭಕ್ತನು ತನ್ನ ಇಷ್ಟದೈವವನ್ನು ಮುಟ್ಟಲು ತಳೆಯುವ ಭಾವನೆಯಲ್ಲಿನ ಗೌರವಪೂರ್ಣ ಸಂಪೂಜನೆಯೇ ಆಗಿದೆ.

ವಚನಕಾರರಲ್ಲಿ ಭಕ್ತಿಯ ಪರಿಕಲ್ಪನೆ:-

ವಚನಕಾರರಿಗೆ 'ಭಕ್ತಿ' ಗುರುಲಿಂಗ, ಜಂಗಮರಲ್ಲಿ ತೋರುವ ಅಚಲವಾದ ಶ್ರದ್ಧೆಯಾಗಿದೆ. ಭಕ್ತಿಯಲ್ಲಿ ತತ್ಪರನಾಗಿ ತನ್ನ ಸಕಲ ಕ್ರಿಯೆಗಳನ್ನು ಶಿವನಿಗೆ ಅರ್ಪಣೆ ಮಾಡುವುದಾಗಿದೆ.

"ನಂಬಿಕೆಯಿಲ್ಲದೆ ನಿಷ್ಠೆನೆಲೆಗೊಳ್ಳದು, ನಿಷ್ಠೆ ನೆಲೆಗೊಳ್ಳದೆ ಎಚ್ಚರ ಮೂಡದು, ಅರಿವಿನ ಎಚ್ಚರವಿಲ್ಲದೆ ಅನುಭವವು ಮೂಡದು, ಅನುಭವವಿಲ್ಲದೆ ಆನಂದವು

ತಲೆದೋರದು, ಆನಂದವಿಲ್ಲದೆ ಶಿವಲಿಂಗದಲ್ಲಿ ಸಾಮರಸ್ಯ ಸಾಧ್ಯವಾಗದು"[4] ವಚನಕಾರರು ಹೀಗೆ ಭಕ್ತಿಯ ಬಗೆಯನ್ನು ತಿಳಿಸಿ, ಇವುಗಳನ್ನು ಅನುಕರಿಸುವವನು ಭಕ್ತನಾಗುವನು ಎಂದು ಹೇಳುತ್ತಾರೆ.

ಈ ನಿಟ್ಟಿನಲ್ಲಿ ವಚನಕಾರರು ಭಕ್ತಿಯ ಸಂದರ್ಭದಲ್ಲು ತಾತ್ವಿಕತೆಯನ್ನು ಅಳವಡಿಸಿಕೊಂಡಿರುವುದು ತಿಳಿದುಬರುತ್ತದೆ ಅಲ್ಲದೆ ವಚನಕಾರರ ಭಕ್ತಿ ಹಲವು ಬಗೆಯದಾಗಿ ಕಂಡುಬರುತ್ತದೆ. ಮಧುರತೆ, ಸತಿ-ಪತಿಭಾವ, ಪ್ರೇಮಮಯವಾಗಿ ಕೆಲವೊಮ್ಮೆ ವ್ಯಕ್ತವಾದರೆ, ಮತ್ತೆ ಕೆಲವು ಸಂದರ್ಭದಲ್ಲಿ ಮುನಿಸಿನಂತೆ, ಕೋಪಕ್ರೋಧಗಳಂತೆ, ಲೌಕಿಕ ನೆಲೆಯ ತೊರೆದು ಅಲೌಕಿಕಕ್ಕೆ ತುಡಿಯುವ ಉತ್ಕಟ ಸಂವೇದನೆಯಂತೆಯೂ ಕಂಡುಬರುತ್ತದೆ.

ಅಲ್ಲದೆ ಭಕ್ತಿಯ ಕುರಿತಾಗಿ ಹೇಳುವಾಗಲೆ ತಾತ್ವಿಕದೃಷ್ಟಿ ಉಳ್ಳವರಾಗಿ ಸಂಪ್ರದಾಯವೆಂದು ನಂಬಿ ನಡೆಯುತ್ತಿದ್ದ ಹಿಂದಿನ ಮಾದರಿಯನ್ನು ನಿರಾಕರಿಸಿದರು. ಭಕ್ತಿಯಲ್ಲಿ ನಿರತನಾದವನಿಗೆ ದ್ವೇಷ, ದುಃಖ, ಸ್ವಾರ್ಥಗಳು, ಎಂದು ಯಾವುದೇ ಬಗೆಯ ಹಂಗಿರುವುದಿಲ್ಲ ಎಂಬ ಭಾವವುಳ್ಳವರಾಗಿರುವುದನ್ನು ಗುರುತಿಸಬಹುದು.

ಅಂದರೆ ವಚನಕಾರರು ಸಿದ್ಧಪುರುಷರಂತಾಗಲಿ, ಚಳುವಳಿಯ ನಾಯಕರಂತಾಗಲಿ ಇರದೆ ಸಾಮಾನ್ಯರಾಗಿದ್ದುಕೊಂಡೆ ವೈಯುಕ್ತಿಕವಾಗಿ ದೈವಿಕ ಅನುಭವವನ್ನು ತಮ್ಮದಾಗಿಸಿಕೊಂಡವರು. ಆ ಕಾರಣ ತಮ್ಮ ಸರ್ವಸ್ವವನ್ನು ಲಿಂಗಾರ್ಪಿತವೆನ್ನುವ ಅನನ್ಯ ಭಾವವನ್ನು ತಳೆದರು.

ಇವರಲ್ಲಿ ಭಕ್ತಿಯೆಂಬುದು ಕೊಟ್ಟು ಪಡೆಯುವ ಪದ್ಧತಿಯಾಗದೆ ಅನುಪಮವಾದ ಮಧುರಭಾವವಾಗಿ ಪ್ರಕಟಗೊಳ್ಳುತ್ತದೆ.

ಅಂತೆಯೇ ಕೆಳವರ್ಗದ ವಚನಕಾರರಲ್ಲಿ ಒರಟುತನ, ಗಡಸುಗಾರಿಕೆ, ಬಂಡಾಯಧೋರಣೆಯ ದೇಸೀ ಸೊಗಡು ಸಹಜವಾಗಿಯೇ ಭಕ್ತಿಯ ಸಂದರ್ಭದಲ್ಲಿ ಒಡಮೂಡಿದೆ. ಏಕೆಂದರೆ ಕೆಳವರ್ಗದವರಲ್ಲಿ ಭಕ್ತಿಯಾಗಲಿ, ಧರ್ಮದ ವಿಚಾರವಾಗಲಿ ಒಡಲಿನ ಪ್ರಶ್ನೆಯಾಗಿರುತ್ತದೆ. ಆದರೆ ಮೇಲ್ವರ್ಗದವರಲ್ಲಿ ಬೇರೆಯೇ ತೆರನಾದ ಭಕ್ತಿಭಾವದ ವಿಚಾರವಿರುವುದನ್ನು ಸೂಕ್ಷ್ಮವಾಗಿ ಮತ್ತು ಸ್ಪಷ್ಟವಾಗಿ ಅವರ ವಚನಗಳ ಮೂಲಕ ಅರಿಯಬಹುದಾಗಿದೆ.

## ಭಕ್ತಿ ಹಾಗೂ ಬಸವಣ್ಣ

ಸಮಾಜದ ಕಂದಾಚಾರ ಹಿಂಸಾಸ್ವರೂಪವನ್ನು ತಾಳಿ ಜನರು ಬೇಸತ್ತ ಸಂದರ್ಭದಲ್ಲಿ ಬಸವಣ್ಣನವರು ಭಕ್ತಿಯ ಹೊಸ ವಿಚಾರಧಾರೆಯನ್ನು ಹರಿಸಿದರು. ಅವರಿಗೆ ಸಮಾಜದ ಮೌಢ್ಯಯ ನಿವಾರಣೆಯಾಗುವ ಸುಸಮಯ ಭಕ್ತಿಯಾಗಿ ಪರಿಣಮಿಸಿದೆ.

ಬಂದುದ ಕೈಕೊಳ್ಳಬಲ್ಲಡೆ ನೇಮ
ಇದ್ದುದ ವಂಚನೆಯ ಮಾಡದಿದ್ದಡೆ ಅದು ನೇಮ
ನಡೆದು ತಪ್ಪದಿದ್ದಡೆ ನೇಮ; ನುಡಿದು ಹುಸಿಯದಿದ್ದಡೆನೇಮ
ನಮ್ಮ ಕೂಡಲಸಂಗನ ಶರಣರು ಬಂದಡೆ
ಒಡೆಯರಿಗೊಡವೆಯನೊಪ್ಪಿಸುವುದೇ ನೇಮ[5]

ದೈವಕೃಪೆ ಸಾಧಿಸಲೋಸ್ಕರ ಉಪಚಾರಕ್ಕೆಂದು ಮಾಡಿದ ಕಾರ್ಯವು ಭಕ್ತಿಯಾಗದು. ಸನ್ಮಾರ್ಗದಲ್ಲಿ ಸಂಪಾದಿಸಿ, ಮನಸಾ ಇಚ್ಛೆ ನೀಡುವವರಾಗಬೇಕು.

ನಡೆ-ನುಡಿಯಲ್ಲಿ ಭೇದವಿಲ್ಲದೆ ನಡೆದು, ಎಲ್ಲವನ್ನು ಪಡೆಯಲು ಕಾರಣಕರ್ತನಾದ ಶಿವನಿಗೆ ಪುನಃ ಒಪ್ಪಿಸುವ ಅಥವಾ ಸಮರ್ಪಿಸುವ ನಿಯಮವೇ ಭಕ್ತಿಯೆಂಬ ವಿಶಿಷ್ಟ ಗ್ರಹಿಕೆಯನ್ನು ಬಸವಣ್ಣನವರು ತಂದುಕೊಟ್ಟರು.

ಸರ್ವಸಮರ್ಪಣ ಭಾವವನ್ನು ಪ್ರತಿಪಾದಿಸಿದ ಬಸವಣ್ಣನವರು ಕಾಯಕ ಮುಖೇನ ಭಕ್ತಿಯನ್ನು ವ್ಯಕ್ತಪಡಿಸಬಹುದೆಂದು ಒಲವಿಲ್ಲದ ಪೂಜೆ ಚಿತ್ರಪಟದ ರೂಪನ್ನು ಆಸ್ವಾದಿಸಿದಂತೆ ನಿಷ್ಪ್ರಯೋಜಕವೆಂದಿದ್ದಾರೆ. ಒಲ್ಲದ ಮನಸ್ಸಿನಿಂದ ಭಕ್ತಿಯನ್ನು ಆಚರಿಸುವ ಅಗತ್ಯವಿಲ್ಲವೆನ್ನುವ ಬಸವಣ್ಣನವರ ವಿಚಾರಸರಣಿ, ಪ್ರತಿಯೊಂದು ಮಾತು ಸಾಮಾಜಿಕರಿಗೆ ವಿಶೇಷ ಶಕ್ತಿ ಹಾಗೂ ಸ್ಫೂರ್ತಿದಾಯಕವಾಗಿ ಕೂಡಿತ್ತು. ಅಷ್ಟೇ ಅಲ್ಲದೆ ಈ ಕೆಳಗಿನ ವಚನವು ಶರಣಸತಿ-ಲಿಂಗಪತಿ ಭಾವವನ್ನು ಸ್ಫುರಿಸುವಲ್ಲಿಯೇ ಲೌಕಿಕ ಕುಟುಂಬದ ನಡುವೆಯೇ ಆಧ್ಯಾತ್ಮವನ್ನು ಆಯ್ಕೆ ಮಾಡಿಕೊಂಡಿರುವುದನ್ನು ತಿಳಿಸಿಕೊಡುತ್ತದೆ.

> ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ!
> ಆ ಪೂಜೆಯ ಆ ಮಾಟವು ಚಿತ್ರರೂಹು ಕಾಣಿರಣ್ಣಾ!
> ಚಿತ್ರದ ಕಬ್ಬು ಕಾಣಿರಣ್ಣಾ!
> ಅಪ್ಪಿದರೆ ಸುಖವಿಲ್ಲ ಮೆಲಿದಡೆ ರುಚಿಯಿಲ್ಲ!
> ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ![6]

**<u>ವಚನಕಾರ್ತಿಯರಲ್ಲಿ ಭಕ್ತಿ</u>**

ವಚನಕಾರರಲ್ಲಿ ಭಕ್ತಿಯು ತಮ್ಮ ಅಸ್ತಿತ್ವದ ಹೊಸಬಗೆಯ ನೆಲೆ ಹಾಗು ತಮ್ಮ ಸಕಲ ವಿಚಾರಗಳ ಸಂದರ್ಭದಲ್ಲಿ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವುದಾಗಿತ್ತು. ಈ ವಿಚಾರವು ಸ್ತ್ರೀಯರಿಗೆ ಹೊರತಾಗಿಯೇನು ಇರಲಿಲ್ಲ. ಸಾಂಪ್ರದಾಯಿಕ ಕೌಟುಂಬಿಕ ಚೌಕಟ್ಟಿನಲ್ಲಿದ್ದುಕೊಂಡೇ ದೈವತ್ವ ಹಾಗೂ ಭಕ್ತಿ ಕುರಿತಂತೆ ಹೊಸ ಬಗೆಯಲ್ಲಿ ಚಿಂತನೆ ನಡೆಸಿದರು. ಅಂತರಂಗ-ಬಹಿರಂಗ ಶುದ್ಧಿಯಿಂದ ಪ್ರಾಮಾಣಿಕವಾಗಿ ಅಭಿವ್ಯಕ್ತಿಸುವ ಆದರ್ಶವನ್ನು ಬೆಳೆಸಿಕೊಂಡರು.

ವಚನ ಚಳುವಳಿಯಲ್ಲಿ ಭಾಗವಹಿಸಿದ ಸ್ತ್ರೀ ಸಮೂಹವು ಆತ್ಮಶಕ್ತಿಯ ಪಡೆದು, ಅವಿದ್ಯೆಯಿಂದ ದೂರಾಗಿ, ಮಾಯೆಯೊಂದಿಗೆ ಸಂವಾದ ನಡೆಸಿ, ದೈಹಿಕ ಕಾಮದ ನೆಲೆಗಳನ್ನು ಮೀರಿ, ಕುಟುಂಬದ ಬಂಧನವನ್ನು ಬಿಡಿಸಿಕೊಂಡು, ಶಕ್ತಿ ಹಾಗು ಸತ್ವಯುತವಾದ ಆತ್ಮೋದ್ಧಾರವನ್ನು ಬಯಸಿದರು.

ವಚನಕಾರ್ತಿಯರಲ್ಲಿ ಶಿವನ ಆರಾಧಿಸುವ ಸಂದರ್ಭದಲ್ಲೇ ಮಧುರ ಭಾವನೆಯಿಂದ ಹೊರಳಿ-ಆಧ್ಯಾತ್ಮದ, ಆತ್ಮವಿಮರ್ಶೆಯ, ಆಕ್ಷೇಪಿಸುವ, ದೂರುವ ಬಂಡಾಯಸ್ವರೂಪವು ಮೈದೋರಿದೆ. ಅವರಲ್ಲಿ ಈ ನಿಟ್ಟಿನಲ್ಲಿ ಹೊಸ ಅರಿವೊಂದನ್ನು ತಲುಪುವ ತೀವ್ರ ಹಂಬಲವಿರುವುದನ್ನು ಕಾಣಬಹುದಾಗಿದೆ.

**ವಚನಕಾರ್ತಿಯರಲ್ಲಿ ಭಕ್ತಿಯ ಆದರ್ಶ:**

**ಅಕ್ಕಮಹಾದೇವಿ**

ಅಕ್ಕ ವೈವಾಹಿಕ ಬದುಕಿನಿಂದ ದೂರ ಸರಿದು ಕುಟುಂಬಕ್ಕೆ ದೂರಾಗಿ ಅಲೌಕಿಕ ಸ್ತರದಲ್ಲಿ ನಿಂತು ಚೆನ್ನಮಲ್ಲಿಕಾರ್ಜುನನ ಸಂಗವ ಬಯಸುವಳು. ಸಜ್ಜನಿಕೆಯಿಲ್ಲದ ಲೌಕಿಕ ಗಂಡನ ಬಗೆಗೆ ಅವಳಿಗೆ ಒಲವಿಲ್ಲ. ಆ ಕಾಲಕ್ಕೆ ಅವಳ ಆ

ಬಗೆಯ ಧೈರ್ಯ, ಆಲೋಚನಾಕ್ರಮ, ಎಲ್ಲ ಬಗೆಯ ಬಂಧನಗಳ ನಿರಾಕರಣೆ ಆಶ್ಚರ್ಯವನ್ನುಂಟುಮಾಡುತ್ತದೆ.

ಅಕ್ಕ ಒಪ್ಪಿತ ಮೌಲ್ಯಗಳ ಬಗೆಗೆ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಹೊಸತನವನ್ನು ಮೈಗೂಡಿಸಿಕೊಂಡು, ಲೌಕಿಕಕ್ಕೆ ನಿಲುಕದ ನಿಲುವನ್ನು ಉಳ್ಳವಳಾಗಿದ್ದಳು. ಶಿವಶರಣೆಯರಲ್ಲಿ ಅಕ್ಕಮಹಾದೇವಿ ತನ್ನ ವಿಭಿನ್ನ ದೃಷ್ಟಿಕೋನದಿಂದ ಮುಖ್ಯಳಾಗುತ್ತಾಳೆ.

ದೇಹದ–ಸಂಸಾರದ ಹಂಗನ್ನು ತೊರೆದು. ದೇಹದ ನಶ್ವರತೆ ಹಾಗು ಕಾಮದ ವಿಕಾರದ ಸ್ವರೂಪವನ್ನು ವಿಷದಪಡಿಸಿ ಚೆನ್ನಮಲ್ಲಿಕಾರ್ಜುನನು ಎನ್ನ ಪತಿ ಎನ್ನುವಳು. ಪ್ರೇಮಯುಕ್ತವಾದ ಭಕ್ತಿಯ ತೀವ್ರತೆಯಲ್ಲಿ ಮುಳುಗಿದ್ದ ಅಕ್ಕನಲ್ಲಿ ಸತಿ–ಪತಿಭಾವ ಸಹಜವಾಗಿಯೇ ಶಿವನನ್ನು ಒಲಿಸಿಕೊಳ್ಳಲು ಯತ್ನಿಸಿದ ಪರಿಯಾಗಿದೆ. ಅಕ್ಕ ಚೆನ್ನಮಲ್ಲಿಕಾರ್ಜುನನ ಒಲುಮೆಗೆ ಕೊಟ್ಟ ಸ್ಥಾನ ಅವಳ ಭಕ್ತಿಯ ತೀವ್ರತೆಯನ್ನು ಮನದಟ್ಟು ಮಾಡಿಸುತ್ತದೆ. ಹೆಣ್ಣಾಗಿ ಅವಳ ಆಧ್ಯಾತ್ಮಿಕ ಗುರಿ ಹಾಗು ನಿಲುವು ಸ್ಪಷ್ಟವಾದುದಾಗಿದೆ. ಅಕ್ಕ ಚೆನ್ನಮಲ್ಲಿಕಾರ್ಜುನನ್ನು ತನ್ನ ಸೌಂದರ್ಯ ಸಾಮ್ರಾಜ್ಯದ ಅಧಿಪತಿ ಎಂದು ಒಪ್ಪಿಕೊಂಡಂತೆ ತೋರುತ್ತದೆ.

ಪುರುಷನ ಮುಂದೆ ಮಾಯೆ
ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ।
ಸ್ತ್ರೀಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ।
ಲೋಕವೆಂಬ ಮಾಯೆಗೆ
ಚರಣಚಾರಿತ್ರ ಮರುಳಾಗಿ ತೋರುವುದು ನೋಡಾ!
ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ
ಮಾಯೆಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.[7]

ಲೋಕದ ಸೌಂದರ್ಯ ಹಾಗೂ ಆಕರ್ಷಣೆಯಿಂದ ಸ್ತ್ರೀ–ಪುರುಷರ ನಡುವೆ ತಮಗರಿವಿಲ್ಲದೆ ಅಭಿಮಾನವು ಮೂಡಿ ಕಾಡುವಾಗ ಶಿವಭಕ್ತರ ವಿಚಾರಗಳು ಮರುಳಂತೆ ತೋರುವುದು. ಆದರೆ ಚೆನ್ನಮಲ್ಲಿಕಾರ್ಜುನನ ಒಲಿಸಿಕೊಂಡರೆ ಒಂದು ನಿರ್ಧಿಷ್ಟ ಸಂದರ್ಭದಲ್ಲಿ ಲೌಕಿಕದ ಮಾಯೆಯು ಹೇಗೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದೆಂಬ ಸಾಧ್ಯತೆಯನ್ನು ಈ ವಚನ ಕಟ್ಟಿಕೊಡುವುದರೊಂದಿಗೆ, ಲಿಂಗತಾರತಮ್ಯದಿಂದಾಗುವ ಲೋಪದೋಷಗಳನ್ನು ಪ್ರತಿಬಿಂಬಿಸುತ್ತದೆ.

ಪ್ರೇಮ, ಧರ್ಮ, ಹಾಗು ಭಕ್ತಿಯೆಂಬುದು ಮನುಷ್ಯರಲ್ಲಿ ಅತ್ಯಂತ ಪ್ರಭಾವ ಶಾಲಿಯಾದ ಭಾವೋದ್ವೇಗವನ್ನು ಉಂಟುಮಾಡಬಲ್ಲದು. ಇಂತು ಈ ವಿಷಯಗಳಲ್ಲಿ ಅತೀವ ತಲ್ಲೀನತೆ ಹೊಂದಿದಾಗ. ಭಾವುಕತೆ, ಉದ್ರೇಕತೆ, ಉತ್ಕಟತೆಗಳಿಂದ ಒಂದು ಬಗೆಯ ಪ್ರತಿಭಟನೆಯ ಛಾಯೆ ತಲೆದೋರುತ್ತದೆ. ಎಂಬುದಕ್ಕೆ ಅಕ್ಕನ ಈ ಕೆಳಕಂಡ ವಚನ ನಿದರ್ಶನದಂತಿದೆ.

ಅಯ್ಯ, ನೀ ಕೇಳಿದರೆ ಕೇಳು, ಕೇಳದಿದ್ದರೆ ಮಾಣು;
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ, ನೀನೊಲಿದರೆ ಒಲಿ, ಒಲಿಯದಿದ್ದರೆ ಮಾಣು;
ನಾ ನಿನ್ನಪೂಜಿಸಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ, ನೀಮೆಚ್ಚಿದರೆ ಮೆಚ್ಚು, ಮೆಚ್ಚದಿದ್ದರೆ ಮಾಣು;
ನಾ ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ !

ಅಯ್ಯ ನೀ ನೋಡಿದರೆ ನೋಡು, ನೋಡದಿದ್ದರೆ ಮಾಣು
ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ
ಚೆನ್ನಮಲ್ಲಿಕಾರ್ಜುನಯ್ಯ, ನಾ ನಿಮ್ಮ ಪೂಜಿಸಿ
ಹರುಷದಲೋಲಾಡುವೆನಯ್ಯಾ[8]

ಅಲೌಕಿಕದ ತೀವ್ರ ಹಂಬಲದಲ್ಲಿ ಶಿವನ ಸಾನಿಧ್ಯವನ್ನು ಪಡೆಯದಾದಾಗ ಹೊರಹೊಮ್ಮಿರುವ ತಿರಸ್ಕಾರಯುಕ್ತ ಮಾತುಗಳು. ತನ್ನ ನೆಚ್ಚಿನ ಚೆನ್ನಮಲ್ಲಿಕಾರ್ಜುನನಿಗೆ ಆಜ್ಞೆಯನ್ನು ನೀಡುವ ಛಲವಂತಿಕೆ ಅವಳಲ್ಲಿ ಇರುವುದನ್ನು ಹಾಗು ನೀನೇನೇ ಮಾಡಿದರೂ ನಿನ್ನ ತೊರೆಯಲಾರೆನೆಂಬ ಭಾವನೆಯಲ್ಲಿ ತನ್ನ ಅಲೌಕಿಕ ಪತಿಯ ಮುಂದೆ ಅಕ್ಕ ಸ್ವಾಭಿಮಾನದ ಹಂಗನ್ನು ತೊರೆದಿಟ್ಟಿರುವುದು ಗೋಚರಿಸುತ್ತದೆ. ಇಲ್ಲಿ ಅವಳ ಭಕ್ತಿಯು ಅಭಿವ್ಯಕ್ತವಾಗುವ ವಿಧಾನವು ಮುಖ್ಯವಾಗುತ್ತದೆ.

**ಅಕ್ಕಮ್ಮ**

ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೆಂಬ ಅಂಕಿತವನ್ನಿಟ್ಟುಕೊಳ್ಳುವ ಮೂಲಕ ಆಚಾರನಿಷ್ಠೆಯೇ ಭಕ್ತಿಯ ಅನುಭವವಾಗಿರುವುದು ಅಕ್ಕಮ್ಮನ ವಿಶೇಷ. ವ್ರತಭ್ರಷ್ಟರು, ಆಚಾರವಿಹೀನರನ್ನು, ಸೋಗುಹಾಕಿ ನಟಿಸುವ ವೇಷಧಾರಿಗಳನ್ನು ಕಟುವಾಗಿ ಟೀಕಿಸುತ್ತಾಳೆ. ವ್ರತಾಚಾರದಿಂದ ಮಾನವವಿಕಾಸವಾಗುವುದೆಂಬ ತಾತ್ವಿಕತೆ ಅವಳ ವಚನಗಳಲ್ಲಿ ಹಾಸುಹೊಕ್ಕಾಗಿವೆ. ಅಕ್ಕಮ್ಮ ಬಹುದೇವತಾರಾಧನೆಯನ್ನು ತೀವ್ರವಾಗಿ ವಿರೋಧಿಸುತ್ತಾಳೆ.

ಅನ್ಯದೈವ ಭವಿನಾಸ್ತಿಯಾದಲ್ಲಿ,
ಪಾದತೀರ್ಥ ಪ್ರಸಾದವಿಲ್ಲದೆ ಬಾಯಿದೆರೆದಲ್ಲಿ,
ಲಿಂಗಕ್ಕೆ ಕೊಡದೆ ಕೊಂಡಲ್ಲಿ,
ಆವ್ರತಕ್ಕೆ ಆಚಾರವೆ ಪ್ರಾಣವಾಗಿರ್ಪ ರಾಮೇಶ್ವರಲಿಂಗ
ದೂರಸ್ಥನಾಗಿಪ್ಪನು.[9]

ಅಕ್ಕಮ್ಮ ಏಕದೇವೋಪಾಸನೆಯನ್ನು ಪ್ರತಿಪಾದಿಸಿ, ಭಕ್ತಿಯ ಪಥದಲ್ಲಿ ಶಿವಧ್ಯಾನವ ಬಿಟ್ಟು ಬೇರೆ ದೈವವೆಂಬುದಿಲ್ಲವೆಂಬ ಪ್ರಭಾವಯುತವಾದ ನಿಲುವನ್ನು ತಲುಪಿದ್ದಾಳೆ.

ಅಕ್ಕಮ್ಮ ಪ್ರತಿಪಾದಿಸುವ ಭಕ್ತಿಯ ನೆಲೆಯು ಪ್ರತಿರೋದಧ ಶಕ್ತಿಯಾಗಿರುವ ವಚನವೊಂದು ಹೀಗಿದೆ.

ಆಚೆಯ ನೀರ ಈಚೆಯಲ್ಲಿ ತೆಗೆವುದು ಚಿಲುಮೆಯಲ್ಲ
ಆಚೆಯಲ್ಲಿ ಕೇಳಿದ ಮಾತ ಈಚೆಯಲ್ಲಿ ನುಡಿದು
ಮತ್ತಾಚೆಯಲ್ಲಿ ಬೆರೆಸುವನು ಭಕ್ತನಲ್ಲ:
ಆತನ ಇದಿರಿನಲ್ಲಿ ಆತನ ಸತಿಯ ಅವ್ವಾ ಎಂದು
ಆತನ ಸಂದಲ್ಲಿ ಸತಿ ಎಂಬ ಭಂಡರಿಗೇಕೆ ವ್ರತ ನೇಮ ನಿತ್ಯ?
ಇಂತಿವರಲ್ಲಿ ಕಳೆದುಳಿಯಬೇಕು
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗವನರಿವುದಕ್ಕೆ.[10]

ಮನುಷ್ಯರು ತಮ್ಮ ಅಂತರಂಗ-ಬಹಿರಂಗವೆರಡನ್ನು ಶುದ್ಧವಾಗಿರಿಸಿಕೊಂಡು ಏಕರೂಪದ ವ್ಯಕ್ತಿತ್ವವನ್ನು ತಳೆಯಬೇಕು. ದುರಾಲೋಚನೆ. ದುರ್ನಡತೆಯಿಂದ

ಅಪಾಯಕರ ಸನ್ನಿವೇಶ ನಿರ್ಮಾಣವಾಗುತ್ತದೆಂದು, ಎಚ್ಚರವನ್ನಿಲ್ಲಿ ಅಕ್ಕಮ್ಮ ನೀಡುತ್ತಾಳೆ. ಭಕ್ತನಾದವನ ಕುರುಹು ಅವನ ಆಚಾರವೆಂಬ ಸ್ವಯಂಶಕ್ತಿಯಿಂದ ನಿರ್ಮಿತವಾಗುವಂತಹುದು. ಅದಬಿಟ್ಟು ಪತಿಯ ಎದುರಲ್ಲಿ ಆಕೆಯನ್ನು ತಾಯಿಯೆಂದು, ಆತನ ಅನುಪಸ್ಥಿತಿಯಲ್ಲಿ ಸತಿ ಎಂಬ ಭಂಡಾಟಿಕೆ ಮಾಡಿದರೆ ಬರುವ ಫಲವೇನು? ಎಂದು ಭಕ್ತನಾದವನಲ್ಲಿರಬೇಕಾದ ಸಹಜ ನಡವಳಿಕೆಯನ್ನು ಅಕ್ಕಮ್ಮ ಮನವರಿಕೆ ಮಾಡಿಕೊಟ್ಟಿದ್ದಾಳೆ.

ಪರಂಪರಾಗತ ಪೂಜಾ ಸಂಸ್ಕೃತಿ ಹಾಗೂ ವಿಧಿವಿಧಾನಗಳಿಗೆ ಸಂಪೂರ್ಣ ವಿದಾಯ ಹೇಳಿ, ಭಕ್ತಿಗೆ ಸಮಾನತೆಯಾಗಿ ಹೊಸ ಪರ್ಯಾಯ ಮಾರ್ಗವನ್ನು ಅಕ್ಕಮ್ಮ ಒದಗಿಸಿಕೊಟ್ಟಿದ್ದಾಳೆ.

ತನ್ನ ಸ್ವಕಾರ್ಯದಿಂದ ಮಾಡುವ
ಭಕ್ತನ ವ್ರತವೆ ವ್ರತ;
ಆತನಾಚಾರವೆ ಸತ್ಯ;
ಆತನಾಶ್ರಯದ ಶೇಷವೆ ಸಂಜೀವನ ಪ್ರಸಾದ.
ಆತನ ರೂಪೆ ಆಚಾರವೆ ಪ್ರಾಣವಾದ
ರಾಮೇಶ್ವರಲಿಂಗದ ನಷ್ಟರೂಪು.[11]

ಇಲ್ಲಿ 'ಸ್ವಕಾರ್ಯ' ಎಂಬ ಪದ ಸ್ವಂತಕಾಯಕದಿಂದ ಎಂಬ ಅರ್ಥವನ್ನು ನೀಡುವುದರೊಂದಿಗೆ ತಾನೇ ಸ್ವತಃ ಪೂಜಿಸುವುದು ಎಂಬ ಅರ್ಥವನ್ನು ಪಡೆಯುವಂತಿದೆ. ಅಂದರೆ ಭಕ್ತನಾದವನು ತನ್ನ ಸ್ವಂತ ಪರಿಶ್ರಮದ ಫಲದಿಂದ ಪೂಜಿಸಬೇಕು, ಎಂದು ಭಕ್ತಿಯನ್ನೊಳಗೊಂಡ ಕಾಯಕ ನಿಷ್ಠೆ ಶ್ರೇಷ್ಠವೆಂಬ ನಿಲುವನ್ನು ಅಕ್ಕಮ್ಮ ತಳೆದಿದ್ದಾಳೆ.

### ಅಮುಗೆ ರಾಯಮ್ಮ

ಅಮುಗೆ ರಾಯಮ್ಮನಲ್ಲಿ ಭಕ್ತಿಯ ಕೈಕೊಳ್ಳಲು ಅನುಸರಿಸಬೇಕಾದ ಮಾರ್ಗದರ್ಶನಕ್ಕಿಂತ ತೋರಿಕೆಯ ಭಕ್ತರನ್ನು ಕಂಡು, ಅವರು ಹೊಂದಬೇಕಾದ ಮುಕ್ತಿಗೆ ಬಂದೊದಗಿರುವ ನೈತಿಕ ಸಮಸ್ಯೆಗಳಿಗೆ ಬೆಳಕಾಗುವ ವಿಶೇಷ ಆಶಯಗಳಿವೆ. ಭಕ್ತಿಯ ಕಾರಣದಿಂದ ಸಕಲ ಮೌಢ್ಯವು ನಿವಾರಣೆಯಾಗಬೇಕೆಂಬ ಗಂಭೀರ ಚಿಂತನೆಯನ್ನಿಲ್ಲಿ ಕಾಣಬಹುದು.

ಅಂಗದ ಅಪ್ಯಾಯನಕ್ಕೆ ಲಿಂಗವ ಮರೆದು ತಿರುಗುವ
ಭಂಡಭವಿಗಳನೇನೆಂಬೆನಯ್ಯಾ?
ಲಿಂಗದಲ್ಲಿ ನಿತ್ಯರಲ್ಲ; ಜಂಗಮದಲ್ಲಿ ಪ್ರೇಮಿಗಳಲ್ಲ
ಹಿಡಿದ ಛಲದಲ್ಲಿ ಕಡುಗಲಿಗಳಲ್ಲ
ಮೃಡನ ಕಂಡೆಹೆನೆಂಬ ಮೂರ್ಖರ ಮುಖವ ನೋಡಲಾಗದು
ಅವರಡಿಯ ಮೆಟ್ಟಲಾಗದು ಕಾಣಾ ಅಮುಗೇಶ್ವರಾ.[12]

ಇಂದ್ರಿಯಗಳ ಒಡನಾಟದಿಂದ ಶಿವನ ಮರೆತು ಭೋಗದ ಜಗತ್ತಿಗೆ ಮಾರುಹೋಗುವವರು ಭಕ್ತರಲ್ಲ, ಭವಿಗಳು. ನಿತ್ಯಪೂಜಿಸದೆ, ಜಂಗಮರಲ್ಲಿ ಗೌರವವಿಲ್ಲದೆ ಬದುಕಿಗೊಂದು ಛಲವಿಲ್ಲದೆ ಶಿವಸಾಕ್ಷಾತ್ಕಾರವಾಯಿತು ಎಂದು ಅಕ್ರಮ ಸಖ್ಯವನ್ನು ಬಯಸುವರ ಮುಖವ ನೋಡುವುದು, ಅವರು ನಡೆದ ದಾರಿಯಲ್ಲಿ ಸಾಗುವುದು ಅಕ್ಷಮ್ಯ ಅಪರಾಧವಾಗಿ ರಾಯಮ್ಮನಿಗೆ ತೋರಿದೆ. ಇವಳಲ್ಲಿ ಭಕ್ತಿಯು

ನಿಷ್ಠೆಯ ಫಲವಾಗಿ ಹಾಗು ಕಾಯದ ಮಮಕಾರವನ್ನು ಮೀರುವ ಸ್ಥರವಾಗಿ ತೋರಿಬರುತ್ತದೆ.

ಅಂಗವಿಕಾರದ ಅಮಲಿನಲ್ಲಿ ತೇಲಾಡುವರ ಕುರಿತು ರಾಯಮ್ಮನಿಗೆ ತೀವ್ರವಾದ ತಿರಸ್ಕಾರವಿದೆ. ಕಾಮವಿಕಾರತೆ ಉಳ್ಳವರಾಗಿ, ವೇಷಧರಿಸಿ, ಜಂಗಮರಂತೆ ಸೋಗುಹಾಕುವರ ಸ್ಥಿತಿಯ ಕಂಡು ನಿರ್ದಾಕ್ಷಿಣ್ಯವಾಗಿ ಸಮಾಜದ ಮುಖಕ್ಕೆ ರಾಚುವಂತೆ ಟೀಕಿಸುತ್ತಾಳೆ.

ಕಾವಿ ಕಾಷಾಂಬರವ ಹೊದ್ದು ಕಾಮವಿಕಾರಕ್ಕೆ ತಿರುಗುವ
ಕರ್ಮಿಗಳಮುಖವ ನೋಡಲಾಗದು.
ಜಂಗಮವಾಗಿ ಜಗದಿಚ್ಛೆಯ ನುಡಿವ
ಜಂಗುಳಿಗಳಮುಖವ ನೋಡಲಾಗದು
ಲಿಂಗೈಕ್ಯರೆನಿಸಿಕೊಂಡು ಅಂಗವಿಕಾರಕ್ಕೆ ತಿರುಗುವ
ಲಿಂಗದ್ರೋಹಿಗಳ ಮುಖವ ನೋಡಲಾಗದು
ಕಾಣ, ಅಮುಗೇಶ್ವರಲಿಂಗವೆ.[13]

ವಚನಕಾರರಲ್ಲಿ ನಡೆ-ನುಡಿಗೆ ಮಹತ್ವದ ಸ್ಥಾನವಿದೆ. ಅಂತರಂಗ ಬಹಿರಂಗಗಳಲ್ಲಿ ಏಕತೆ ಇರದೆ, ಒಳಗೊಂದು ಹೊರಗೊಂದು ವರ್ತನೆಗಳನ್ನು ಬೆಳೆಸಿಕೊಂಡು ಲೋಕದ ಕಣ್ಣಲ್ಲಿ ಯೋಗ್ಯರೆನಿಸಿಕೊಂಡು ಅಯೋಗ್ಯಕರವಾದ ಕಾರ್ಯಗಳತ್ತ ಗಮನ ಕೊಡುವ ನಡೆ-ನುಡಿ ಪರಿಶುದ್ಧವಿಲ್ಲದವರನ್ನು ನೋಡಲಾಗದು ಎಂದು ಡಾಂಭಿಕ ವ್ಯಕ್ತಿಗಳ ಕುರಿತು ರಾಯಮ್ಮ ಕಟುವಾದ ನಿಲುವನ್ನು ತಳೆದಂತಿದೆ.

ರಾಯಮ್ಮ 'ತಾನೆ ಅಮುಗೇಶ್ವರ ಲಿಂಗ'ವೆಂದಿದ್ದಾಳೆ. ಗುರು-ಲಿಂಗ-ಜಂಗಮ ಈ ತ್ರಿವಿಧದಲ್ಲಿ ಭಕ್ತ ಸಂಪೂರ್ಣನಾಗಿ ಲೀನವಾದಾಗ ಅರ್ಥಾತ್ ಅರಿವು ಬೆಳೆದಾಗ ಜೀವಾತ್ಮವು ಪರಮಾತ್ಮನಲ್ಲಿ ಐಕ್ಯವಾದಾಗ ಇಂದ್ರಿಯಾತೀತವಾದ ಸರ್ವಸಿದ್ಧಿ ಸಮನಿಸಿದಾಗ ಲೌಕಿಕದ ಗುರು-ಲಿಂಗ-ಜಂಗಮ ಪ್ರಸಾದವೆಂಬುದಿಲ್ಲ. ಏಕೆಂದರೆ ಭಕ್ತನೇ ಲಿಂಗವಾದಾಗ, ಲಿಂಗವನ್ನು ಅರಿದೆನು ಎಂಬ ಹಂಗು ನಿಜವಾದ ಭಕ್ತನಿಗಿರುವುದಿಲ್ಲ. ಭಕ್ತ ದೈವೀಕತೆಯೆಡೆಗೆ ಸಾಗುವ ಪರಿಪಕ್ವ ಮನಸ್ಥಿತಿಯನ್ನು ಅಮುಗೆ ರಾಯಮ್ಮ ಈ ಕೆಳಗಿನ ವಚನದಲ್ಲಿ ಚಿಂತಿಸಿರುವಂತಿದೆ.

ನಾನೆಗುರುವಾದ ಬಳಿಕ ಗುರುವೆಂಬುದಿಲ್ಲ,
ನಾನೆ ಲಿಂಗವಾದ ಬಳಿಕ ಲಿಂಗವೆಂಬುದಿಲ್ಲ,
ನಾನೆ ಜಂಗಮವಾದಬಳಿಕ ಜಂಗಮವೆಂಬುದಿಲ್ಲ,
ನಾನೆ ಪ್ರಸಾದವಾದಬಳಿಕ ಪ್ರಸಾದವೆಂಬುದಿಲ್ಲ
ಅಮುಗೇಶ್ವರನೆಂಬ ಲಿಂಗವು ತಾನೆಯಾದ ಬಳಿಕ
ಲಿಂಗವನರಿದೆನೆಂಬ ಹಂಗಿನವನಲ್ಲ.[14]

**ಆಯ್ದಕ್ಕಿ ಲಕ್ಕಮ್ಮ**

ಆಯ್ದಕ್ಕಿ ಲಕ್ಕಮ್ಮನಲ್ಲಿ ಬರುವ ಭಕ್ತಿಯ ಸ್ವರೂಪ ಕಾಯಕದ ಮುಖೇನ ವ್ಯಕ್ತವಾಗುವ ಪರಿಯನ್ನು ಕಾಣಬಹುದು. ಕಾಯಕವಿಲ್ಲದ ಭಕ್ತಿಯಾಗಲಿ, ಭಕ್ತಿಯಿಲ್ಲದ ಕಾಯಕವಾಗಲಿ ವ್ಯರ್ಥ, ಹಾಗೂ ಅರ್ಥಹೀನವೆನ್ನುತ್ತಾಳೆ.

ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ?
ಬೆಟ್ಟ ಬಲ್ಲಿತ್ತೆಂದೆಡೆ,ಉಳಿಯ ಮೊನೆಯಲ್ಲಿ ಬಡತನವಿದ್ದಡೆ
ಒಡೆಯದೆ?
ಘನಶಿವಭಕ್ತರಿಗೆ ಬಡತನವಿಲ್ಲ ಸತ್ಯರಿಗೆ ದುಷ್ಕರ್ಮವಿಲ್ಲ
ಎನಗೆ ಮಾರಯ್ಯಪ್ರಿಯ ಅಮಲೇಶ್ವರಲಿಂಗವುಳ್ಳನ್ನಕ್ಕ
ಆರ ಹಂಗಿಲ್ಲ ಮಾರಯ್ಯ.[15]

ಅಂಗಕ್ಕೆ ಬಡತನ ಹಾಗು ಮುಪ್ಪಲ್ಲದೆ ಮನಕ್ಕೆ ಬಡತನ ಹಾಗು ಮುಪ್ಪೆಂಬುದಿಲ್ಲ. ಮನಸ್ಸೆಂಬುದು ಶಾಶ್ವತವಾದುದು. ಶಾಶ್ವತವಾದುದರೆಡೆಗೆ ಭಕ್ತನಿದ್ದಲ್ಲಿ ಬಡತನವಿಲ್ಲ, ದುಷ್ಕರ್ಮವಿಲ್ಲವೆಂದಿದ್ದಾಳೆ. ಇಲ್ಲಿ ಆಸೆಯ ಪಾಶವನ್ನು ತೊರೆದು ಕಾಯಕನಿಷ್ಠೆ ಮತ್ತು ಜಂಗಮ ಭಕ್ತಿಯನ್ನು ಸಾಧಿಸಬೇಕೆಂಬ ತನ್ನ ನಿರ್ಧಾರವನ್ನು ಸೂಚಿಸಿರುವಂತೆ ತೋರುತ್ತದೆ.

ಲಕ್ಕಮ್ಮ ಭಕ್ತಿಯ ಆಚರಣೆ ಯಾರೊಬ್ಬರ ಸ್ವತ್ತಲ್ಲವೆಂದು, ಸನ್ಮಾರ್ಗದಲ್ಲಿ ನಡೆಯುತ್ತಲೇ ಲಿಂಗನಿಷ್ಠೆಯಿಂದ ಭಕ್ತಿ ಸಾಧನೆ ಸಾಧ್ಯ ಎಂದಿದ್ದಾಳೆ.

ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು;
ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ;
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ;
ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ,
ಮಾರಯ್ಯಪ್ರಿಯ ಅಮಲೇಶ್ವರಲಿಂಗವ ಮುಟ್ಟದ ಭಕ್ತಿ.[16]

ಭಕ್ತಿಯ ಪುಷ್ಟೀಕರಿಸುವ ಲಕ್ಕಮ್ಮ ನಿರ್ಭೀತಿಯ ನೇರನುಡಿಯಿಂದ ಅನಾಚಾರಿಗಳನ್ನು, ಗರ್ವದಿಂದ ಕೊಡದೆ ತ್ಯಾಗಿ ಎನಿಸಿಕೊಳ್ಳುವರನ್ನು ನಿರ್ಭಯವಾಗಿ ಟೀಕಿಸುತ್ತಾಳೆ. ದೃಢವಿಲ್ಲದ ಭಕ್ತಿಯು ಮುಡಿಯಿಲ್ಲದ ಶೃಂಗಾರವೆಂದು ಜರಿದು ಇದು "ಮಾರಯ್ಯಪ್ರಿಯ ಅಮಲೇಶ್ವರ ಲಿಂಗವ ಮುಟ್ಟದ ಭಕ್ತಿ" ಎನ್ನುವ ಮೂಲಕ ಮಾಡಿದ ಪೂಜೆ ನಿಶ್ಫಲವೆಂದಿದ್ದಾಳೆ.

ಲಕ್ಕಮ್ಮ ಅಂತರಂಗ ಮತ್ತು ಬಹಿರಂಗ ಕ್ರಿಯೆ ಹಾಗೂ ಭಾವದಲ್ಲಿ ಅನುಸಂಧಾನವಿರಬೇಕು ಎಂದು ಭಾವಯುತವಾದ ಭಕ್ತಿಯ ಮಹತ್ವವನ್ನು ಎತ್ತಿ ಹಿಡಿದಿದ್ದಾಳೆ.

ಕಾಯವಳಿದ ಠಾವಿನಲ್ಲಿ ಜೀವದ ಎಡೆಯಾಟ ಉಂಟೆ?
ಭಾವವಿಲ್ಲದ ಭಕ್ತಿ ಹೋಯಿತು
ಮಾರಯ್ಯಪ್ರಿಯ ಅಮಲೇಶ್ವರ ಲಿಂಗವ ಮುಟ್ಟದೆ.[17]

ದೇಹ ಹಾಗೂ ಪ್ರಾಣದ ಅಸ್ತಿತ್ವ ಒಮ್ಮೆಲೆ ಇರುವಾಗ ಒಂದಕ್ಕೊಂದು ಪೂರಕವಾಗಿ ಕಾರ್ಯನಿರ್ವಹಿಸುವಂತೆ, ಭಾವದಿಂದ ಕೂಡಿದ ಭಕ್ತಿಯಲ್ಲಿ ಜೀವಂತಿಕೆ ಸಾಧ್ಯ. ಇಲ್ಲವಾದರೆ ಯಾಂತ್ರಿಕತೆ ಮೂಡಿ ಭಕ್ತಿಯ ಉದ್ದೇಶ ಸಾಫಲ್ಯವಾಗುವುದಿಲ್ಲವೆಂದು ಭಕ್ತಿ ಭಾವದ ಸಂಬಂಧಗಳನ್ನು ವಿಮರ್ಶಿಸಿದ್ದಾಳೆ.

**ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ**

ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯಲ್ಲಿ ಭಕ್ತನ ಲಕ್ಷಣ ಕುರಿತಾಗಿ ನಿಜವಾದ ಭಕ್ತನಾಗಲು ವಹಿಸಬೇಕಾದ ಲಕ್ಷಣಗಳೆಡೆಗೆ ಮುಖ್ಯ ಕಾಳಜಿಯಾಗಿರುವುದನ್ನು ಈ ಕೆಳಕಂಡ ವಚನದಲ್ಲಿ ಗುರುತಿಸಬಹುದು.

ತೂಬರದ ಕೊಳ್ಳಿಯಂತೆ ಉರಿವಾತ ಭಕ್ತನೆ?
ಹುಸಿದು ತಂದು ಮಾಡುವಾತ ಭಕ್ತನೆ?
ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ?
"ನಿಂದಯಾ ಶಿವಭಕ್ತಾನಾಂಕೋಟಿ ಜನ್ಮನಿ ಸೂಕರಃ
ಸಪ್ತಜನ್ಮನಿ ಭವೇತ್ ಕುಷ್ಠೀ ದಾಸಿಗರ್ಭೇಷು ಜಾಯತೇ"॥[18]
ಎಂದುದಾಗಿ, ತನ್ನ ಪ್ರಾಣದ ಮೇಲೆ ಬಂದಡೂ ಬರಲಿ,
ಇವರ ಬಿಡಬೇಕು.
ಬಿಡದಿರಲು ಉರಿಲಿಂಗಪೆದ್ದಿಗಳರಸನೊಲ್ಲನವ್ವಾ.[18]

ಕೋಪತಾಳುವ, ಹುಸಿಯನುಡಿಯುವ, ಕುಲವನ್ನು ಮೇಲುಮಾಡಿ ಇತರರ ನಿಂದಿಸುವ ಭಕ್ತನಾಗನು, ಇಂತವರ ಸಹವಾಸವನ್ನು ವಿಷಮಪರಿಸ್ಥಿತಿಯಲ್ಲೂ ತೊರೆಯಬೇಕು. ಭಕ್ತನಾದವನು ಸಕಲ ವಿಚಾರಗಳಲ್ಲು ದಯೆಯುಳ್ಳವನಾಗಿರುತ್ತಾನೆಂದು. ಕಾಳವ್ವೆ ನೇರವಾಗಿ ಹೇಳಿರುವಲ್ಲಿ ಅವಳ ಸ್ಪಷ್ಟ ಚಿಂತನೆಯ ದಿಟ್ಟತನವನ್ನು ಕಾಣಬಹುದಾಗಿದೆ.

## ನೀಲಮ್ಮ

ನೀಲಮ್ಮ ಬಸವಣ್ಣನವರ ಎರಡನೇ ಪತ್ನಿ. ಈಕೆ ಬಸವಣ್ಣನ ಸಮಗ್ರ ವ್ಯಕ್ತಿತ್ವದ ಆರಾಧಕಳು. ಅಮೂರ್ತ ದೈವವನ್ನು ತನ್ನ ಅಂತರಂಗದಲ್ಲಿ ಸ್ಥಾಪಿಸಿಕೊಳ್ಳುವುದಕ್ಕಿಂತ ತನ್ನ ಪ್ರತ್ಯಕ್ಷ ದೈವವಾದ ಬಸವಣ್ಣನನ್ನೇ ಸ್ಥಾಪಿಸಿಕೊಂಡಿರುವುದು ಸಹಜವಾಗಿದೆ.

ಆನುಭಕ್ತೆಯಲ್ಲ, ಆನು ವಿರಕ್ತೆಯಲ್ಲ
ಆನು ನಿಜ ಸುಖಿಯಲ್ಲ
ಆನು ಬಸವನ ಮೂರ್ತಿಯ ಕಂಡು ಬದುಕಿದೆನಯ್ಯ ಸಂಗಯ್ಯ.[19]

ಸಮಾನತೆ ನೆಲೆಗೊಳ್ಳಬಹುಸುವ ಸಮತಾವಾದಿಯಾದ ತನ್ನ ಪತಿಗೆ ಕೃತಜ್ಞತೆ ವ್ಯಕ್ತಪಡಿಸುವಲ್ಲಿ ನೀಲಮ್ಮ ಹೆಚ್ಚಿನ ಕಾಳಜಿ ವಹಿಸುತ್ತಾಳೆ.

ಆನು ನಿಷ್ಠೆಯುಳ್ಳವಳಲ್ಲ ಎನ್ನುತ್ತಲೆ ತಾನು ಪೂಜಿಸುವ ದೈವದಲ್ಲಿ ಬಸವನನ್ನು ಕಾಣುವ ಪತಿವ್ರತೆಯಾಗಿದ್ದಾಳೆ. ಬಸವಣ್ಣನ ಆಧ್ಯಾತ್ಮಿಕ ಚಿಂತನೆ, ವೈಚಾರಿಕ ಮನೋಧರ್ಮ ಗುರು-ಲಿಂಗ-ಜಂಗಮ ಭಕ್ತಿಯ ಕಂಡು ಮಾರುಹೋಗಿರುವಂತೆ ಕಾಣಬರುತ್ತಾಳೆ. ಆ ಕಾರಣ ಸಹಭಾಗಿನಿಯಾಗಿ ಅವರ ವ್ಯಕ್ತಿತ್ವದಲ್ಲಿ ಅನುರಕ್ತೆಯಾಗಿರುವುದು ಸಹಜವೇ ಆಗಿದೆ.

"ಲೋಕದಲ್ಲಿದ್ದು ಲೋಕಧರ್ಮವನ್ನು, ದೇಹಧಾರಿಯಾಗಿದ್ದೂ ದೇಹಭಾವವನ್ನು ಮೀರಿ ಭಾವ ನಿರ್ಭಾವವಾಗಿ, ಹೃದಯದ ಕತ್ತಲೆ ಕಳೆದುಕೊಂಡು "ಹೃದಯಪ್ರಸನ್ನೆ"ಯಾಗಿ ಬದುಕಿದ ಸ್ವಾನುಭಾವದ ವಿವೇಚನೆ ಅವಳ ವಚನಗಳಲ್ಲಿ ದಟ್ಟವಾಗಿದೆ."[20]

## ಬತ್ತಲೇಶ್ವರ ಪುಣ್ಯಸ್ತ್ರೀ ಗುಡ್ಡವ್ವೆ

ಬತ್ತಲೇಶ್ವರನ ಪುಣ್ಯಸ್ತ್ರೀ ಗುಡ್ಡವ್ವೆಯ ಒಂದೇ ಒಂದು ವಚನದಲ್ಲಿ ಭಕ್ತಿಯು ವ್ರತಾಚಾರ ನಿಷ್ಠೆಉಳ್ಳದ್ದಾದರೆ ಪರಮಾತ್ಮನಿಗೆ ಸಲ್ಲುವುದೆಂಬ ಅಂಶ ವ್ಯಕ್ತವಾಗಿದೆ.

ತನು ಬತ್ತಲೆಯಾದಡೇನು, ಮನ ಬತ್ತಲೆಯಾಗದನ್ನಕ್ಕ?
ವ್ರತವಿದ್ದಡೇನು, ವ್ರತಹೀನರಾದ ಬಳಿಕ?
ನೆರೆದಡೆ ನರಕವಯ್ಯಾ ನಿಂಬೇಶ್ವರಾ.[21]

ಪೂಜೆ, ತೀರ್ಥಸ್ನಾನ, ಪಾವಿತ್ರ್ಯತೆ ಇತ್ಯಾದಿ ಬಾಹ್ಯ ಕ್ರಿಯಾಚರಣೆಗಳು ಮುಖ್ಯವಲ್ಲ. ಅಂತರಂಗ ಶುದ್ಧಿಯ ಮಾನವೀಯತೆಯ ಪ್ರೇಮಪೂರಿತ ಆಚರಣೆಗೆ ಶರಣಾಗಬೇಕೆಂದು, ಇಲ್ಲವಾದರೆ ಅವರ ಬಾಳು ನರಕವೆಂದಿದ್ದಾಳೆ.

"ವಚನದಲ್ಲಿ ಬಳಕೆಯಾಗಿರುವ 'ಬತ್ತಲೆ' ದೇಹದ ನೆಲೆಯನ್ನು ಮೀರಿ ಭಾವ ಬತ್ತಲೆಯಾಗುವ ಆಧ್ಯಾತ್ಮಿಕ ಅರ್ಥವಿಸ್ತಾರವನ್ನು ಪಡೆದುಕೊಂಡಿದೆ. ವಿರಕ್ತಿಯ ಸಂಕೇತವಾದ ತನು ಬತ್ತಲೆಯು ಕಾಯಗುಣಗಳನ್ನು ಮನದ ಸಂಚಲನೆಯನ್ನು ಭಾವ ವಿಕಾರಗಳನ್ನು ಕಳೆದುಕೊಂಡ, ಅನುಭಾವಿ ನಿರ್ಭಾವದ ಸಂಕೇತವಾಗಬೇಕೆನ್ನುವ ಆಶಯವಿದೆ."[22]

## ಮೋಳಿಗೆ ಮಹಾದೇವಿ

ಮೋಳಿಗೆ ಮಹಾದೇವಿ ವಚನ ಚಳುವಳಿಯ ಸಾಮಾಜಿಕ, ಧಾರ್ಮಿಕ. ಆಧ್ಯಾತ್ಮಿಕ ಹಾಗೂ ವೈಚಾರಿಕ ಚಿಂತನೆಗಳಿಗೆ ಪ್ರಭಾವಿತರಾಗಿ, ಬಸವಣ್ಣನ ಸೃಜನಶೀಲ ವಿಚಾರಕ್ಕೆ ಮಾರುಹೋಗಿ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದವಳು. ಸಮರಸವಾದ ಭಕ್ತಿಮಾರ್ಗವನ್ನು ವಿವರಿಸುವ ಸಂದರ್ಭವಲ್ಲೇ ಏಕದೇವೋಪಾಸನೆಯನ್ನು ಪ್ರತಿಪಾದಿಸುತ್ತಾಳೆ.

ಆರು ದೇವರ ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ.
ಮೂರು ದೇವರ ನಿಮ್ಮ ಮೂಗಿನಲ್ಲಿ ಮುರಿದುಕೊಳ್ಳಿ,
ಗುರು ತೋರಿದ್ದು ಒಂದೇ ದೇವರು ಸಾಕು
ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ[23]

ಸರಳಭಕ್ತಿಯಿಂದ ಇಷ್ಟಲಿಂಗದೊಂದಿಗೆ ಸಮರಸ ಸಾಧಿಸಬೇಕೆಂದು ಗುರು ತೋರಿದ ಒಂದೇ ದೇವರು ಸಾಕೆನ್ನುವ ಏಕದೈವನಿಷ್ಠೆಯುಳ್ಳ ಪ್ರಬುದ್ಧ ಚಿಂತನೆಯನ್ನು ಮೋಳಿಗೆಯ ಮಹಾದೇವಿಯಲ್ಲಿ ಕಾಣಬಹುದಾಗಿದೆ. 'ಎದೆಯಲ್ಲಿ ಇರಿದುಕೊಳ್ಳಿ' 'ಮೂಗಿನಲ್ಲಿ ಮುರಿದುಕೊಳ್ಳಿ' ಎನ್ನುವಲ್ಲಿ ಮಹಾದೇವಿ ಖಂಡಿತವಾದಿಯಂತೆ ತೋರುತ್ತಾಳೆ.

## ಮುಕ್ತಾಯಕ್ಕ

ಜ್ಞಾನ-ಐಶ್ವರ್ಯ-ಮೋಕ್ಷ ಸಾಧನೆಗೂ ಗುರು-ಲಿಂಗ-ಜಂಗಮರಿಗೂ ಇರುವ ಅಂತ ಸಂಬಂಧವನ್ನೂ ಮುಕ್ತಾಯಕ್ಕೆ ಸ್ಪಷ್ಟವಾಗಿ ಸೂಚಿಸಿರುವುದನ್ನು ಈ ಕೆಳಕಂಡ ವಚನದಲ್ಲಿ ಗುರುತಿಸಬಹುದು.

ಜ್ಞಾನಮೂಲ ಗುರುಸೇವೆ ಎಂಬೆನು.
ಐಶ್ವರ್ಯಮೂಲ ಲಿಂಗಾರ್ಚನೆ ಎಂಬೆನು.
ಮೋಕ್ಷಮೂಲ ಘಟಸಂತೃಪ್ತಿ ಎಂಬೆನು ಅಜಗಣ್ಣಲಿಂಗವೆ[24]

ಇವಳು ಗುರುವಿಲ್ಲದೆ ಅರಿವು ಅಸಾಧ್ಯವೆಂಬ ಅಭಿಪ್ರಾಯವನ್ನು ದೃಢವಾಗಿ ಪ್ರತಿಪಾದಿಸಿ, ಆತ್ಮಜ್ಞಾನವ ಹೊಂದಲು ಗುರುಸೇವೆ. ಲಿಂಗಾರ್ಚನೆ ನಡೆಸಬೇಕೆನ್ನುತ್ತಾಳೆ. ಮೋಕ್ಷಕ್ಕೆ ದೇಹಸಂತೃಪ್ತಿಯು ಪರಿಣಾಮಕಾರಿಯಾಮದು ಎಂಬ ಪ್ರಜ್ಞಾಪೂರ್ವಕವಾದ ಮಾತನ್ನು ಮುಕ್ತಾಯಕ್ಕ ಆಡಿದ್ದಾಳೆ. ಜಂಗಮರನ್ನು ಸಂತೃಪ್ತಪಡಿಸುವ ಮೂಲಕ ಆತ್ಮ ಪರಮಾತ್ಮನನ್ನು ಸೇರುವುದೆಂಬುದು ಮುಕ್ತಾಯಕ್ಕನ ನಿಲುವಾಗಿರುವಂತೆ ತೋರುತ್ತದೆ. ಆ ಮೂಲಕ ಸೂಕ್ಷ್ಮವಾಗಿ ಗಮನಿಸಬೇಕಾದ ವಿಷಯವೆಂದರೆ ವ್ಯಕ್ತಿಯ ಅಭಿಮಾನಕ್ಕೆ

ಕಾರಣವಾಗುವ ಜ್ಞಾನ-ಐಶ್ವರ್ಯ, ಮೋಕ್ಷಗಳಿಗಿಂತ ಗುರು-ಲಿಂಗ-ಜಂಗಮರ ಸಾನಿಧ್ಯವನ್ನು ಸೇರಬೇಕೆನ್ನುವ ತೀವ್ರವಾದ ಸ್ಥಿತಿ ರೂಪುಗೊಂಡಿದೆ.

**ಸತ್ಯಕ್ಕ**

ಸತ್ಯಕ್ಕ ನಿಷ್ಠಾವಂತ ಶಿವಭಕ್ತೆಯೆನಿಸಿ, ಭಕ್ತಿಯ ಉತ್ಕಟತೆಯಲ್ಲಿ ಮಾನಸಿಕ ತೊಳಲಾಟಕ್ಕೆ ಅನಿವಾರ್ಯವಾಗಿ ಸಿಲುಕಿರುವ ಸಂಗತಿಯನ್ನು ಈ ಕೆಳಗಿನ ವಚನ ತೋರಿಸುತ್ತದೆ.

ಏಕೆನ್ನ ಬಾರದ ಭವಗಳಲ್ಲಿ ಬರಿಸಿದೆ?
ಏಕೆನ್ನ ಘೋರ ಸಂಸಾರದಲ್ಲಿರಿಸಿದೆ?
ಏಕೆನಗೆ ಕರುಣಿಸಲೊಲ್ಲದೆ ಕಾಡಿಹೆ?
ಏಕೆ ಹೇಳಾ ಎನ್ನ ಲಿಂಗವೆ? ಆನುಮಾಡಿದ ತಪ್ಪೇನು?
ಸಾಕಲಾಗದೆಂದು ಅಕ್ಕೊತ್ತಿ ನೂಕಿದಡೆ
ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ?[25]

ಆ ಕಾಲಮಾನದ ಹಿನ್ನೆಲೆಯನ್ನು ಗ್ರಹಿಸಿದಾಗ ಸ್ತ್ರೀಯರ ಸ್ಥಿತಿ ಶೋಚನೀಯ ಸ್ಥಿತಿಯಲ್ಲಿ ಸಾಗಿ ಬಂದುದು ತಿಳಿದುಬರುತ್ತದೆ. ಆ ಕಾರಣ ಬಹುಕಟ್ಟುನಿಟ್ಟಾದ ವಾತಾವರಣದಲ್ಲಿ ಬೆಳೆದ ಸ್ತ್ರೀಯರಲ್ಲಿ ಸಹಜವಾಗಿಯೇ ಲೋಕ ವ್ಯವಸ್ಥೆಯ ಬಗೆಗೆ ತಿರಸ್ಕಾರವಿತ್ತು. ಸತ್ಯಕ್ಕ ಸ್ವತಃ ಆ ಚೌಕಟ್ಟಿನಲ್ಲಿ ಸಿಲುಕಿ ಏಕೆನ್ನ ಜನನ ಮರಣವೆಂಬ ಘೋರ ಲೋಕದ ಸಂಸಾರದಲ್ಲಿ ಸಿಲುಕುವಂತೆ ಮಾಡಿದೆ? ಎಂದು ಮತ್ತೆ ಮತ್ತೆ ಪ್ರಶ್ನಿಸುತ್ತಾಳೆ. ಪ್ರಶ್ನಿಸುತ್ತಲೇ ತನ್ನನ್ನು ಈ ಭವಬಂಧನದಿಂದ ಮುಕ್ತಳನ್ನಾಗಿ ಮಾಡುವ ಕರ್ತವ್ಯ ನಿನ್ನದೆಂದು ತನ್ನ ಇಷ್ಟಲಿಂಗವನ್ನು ಹಕ್ಕಿನಿಂದಲೇ ಪ್ರಶ್ನಿಸಿರುವುದು ಕುತೂಹಲಕಾರಿಯಾಗಿದೆ.

**ಹಡಪದ ಪುಣ್ಯಸ್ತ್ರೀ ಲಿಂಗಮ್ಮ**

ಲಿಂಗಮ್ಮನಿಗೆ ಸೃಷ್ಟಿಯ ವಿಸ್ಮಯದ ಅರಿವು ಮುಖ್ಯವಾಗಿ ದೇಹದ ಹಂಗನ್ನು ಮೀರುವ ಪ್ರಯತ್ನ ಮಾಡುತ್ತಾಳೆ. ಅವಳಲ್ಲಿ ಮನಶುದ್ಧವಿಲ್ಲದೆ ಮಾಡುವ ಪೂಜೆಯ ನಿರಾಕರಣೆ ಹಾಗೂ ಸತ್ಯಶುದ್ಧ ಕ್ರಿಯಾಶೀಲ ಬದುಕಿನ ಸ್ವೀಕೃತಿಯನ್ನು ಕಾಣಬಹುದಾಗಿದೆ.

ಅಂತರಂಗ ಬಹಿರಂಗ ಶುದ್ಧವಿಲ್ಲದೆ ನುಡಿವರು ಸಂತೆಯ ಸೂಳೆಯರಂತೆ.
ಅಂತರಂಗ ಬಹಿರಂಗವೆಂಬುದಿಲ್ಲ ನಮ್ಮ ಶಿವಶರಣರಿಗೆ
ಅಂತರಂಗವೆಲ್ಲ ಅರುಹಾಯಿತ್ತು; ಬಹಿರಂಗದಲ್ಲಿ ಲಿಂಗವಾಯಿತ್ತು.
ಆ ಲಿಂಗದಲ್ಲೆ ನುಡಿದು ಲಿಂಗದಲ್ಲೆ ನಡೆದು
ಲಿಂಗದಲ್ಲಿ ಮುಟ್ಟಿ, ಲಿಂಗದಲ್ಲೆ ವಾಸಿಸಿ
ಲಿಂಗದಲ್ಲೆ ಕೇಳಿ, ಲಿಂಗವಾಗಿ ನೋಡಿ
ಸರ್ವಾಂಗವು ಲಿಂಗವಾಗಿ, ಆ ಲಿಂಗವ ನೋಡುವ ಕಂಗಳಲ್ಲೆ ಐಕ್ಯ
ಕಂಡೆಯಾ, ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣಾ.[26]

ಲಿಂಗಮ್ಮ, ದೈಹಿಕ ಹಾಗೂ ಮಾನಸಿಕ ಮಿತಿಗಳನ್ನು ಮೀರಿದ ಅನುಭವಿಯಂತೆ ಕಂಡುಬಂದು, ಮನುಷ್ಯನ ಅಸ್ತಿತ್ವದ ಬಗೆಗೆ ಕೊಡುವ ನಿರ್ವಚನ ಇಲ್ಲಿ ಮುಖ್ಯವಾಗುತ್ತದೆ. ಅವಳಿಗೆ ಇಡೀ ದೇಹವೆ ಲಿಂಗವಾಗಿ ತೋರುತ್ತದೆ. ಅರಿವಿನ

ಸಾಧನೆಗೆ ದೇಹದಂಡನೆಯಾಗಬೇಕಿಲ್ಲವೆಂದು, ದೇಹ ಮನಸ್ಸುಗಳಲ್ಲಿ ಲಿಂಗಗುಣ ಸಮನ್ವಯಗೊಳ್ಳುವ ಮಾರ್ಗಗಳನ್ನು ನಿರ್ದೇಶಿಸುತ್ತಾಳೆ.

ರೇವಣ್ಣ ಸಿದ್ಧಯ್ಯಗಳ ಪುಣ್ಯಸ್ತ್ರೀ ರೇಕಮ್ಮ

ರೇಕಮ್ಮನ ಒಂದು ವಚನ ಮಾತ್ರ ದೊರೆತಿದ್ದು, ಧರ್ಮ ಮಾರ್ಗದಲ್ಲಿ ನಡೆಯದೆ ಭಕ್ತಿಯ ಕೈಗೊಳ್ಳದವರನ್ನು ಗುರುಸಿದ್ದೇಶ್ವರ ನರಕದಲ್ಲಿಡುತ್ತಾನೆ, ಎಂದು ಎಚ್ಚರಿಸುತ್ತಾಳೆ. ಈ ನಿಟ್ಟಿನಲ್ಲಿ ರೇಕಮ್ಮ ಎಚ್ಚರಿಕೆ ವಹಿಸುವಾಗಲೆ ಸ್ತ್ರೀಯರಿಗೆ ದೊರೆತ ಅಭಿವ್ಯಕ್ತಿ ಸ್ವಾತಂತ್ರ್ಯದ ದರ್ಶನವಾಗುತ್ತದೆ.

ಲಿಂಗಬಾಹ್ಯನ, ಆಚಾರಭ್ರಷ್ಟನ, ವ್ರತತಪ್ಪುಕನ,
ಗುರುಲಿಂಗಜಂಗಮವ ಕೊಂದವನ, ಪಾದೋದಕಪ್ರಸಾದ ದೂಷಕನ
ವಿಭೂತಿ ರುದ್ರಾಕ್ಷಿ ನಿಂದಕನ ಕಂಡಡೆ
ಶಕ್ತಿಯುಳ್ಳಡೆ ಸಂಹಾರವ ಮಾಡುವುದು.
ಶಕ್ತಿಯಿಲ್ಲದಿದ್ದಡೆ ಕಣ್ಣು ಕರ್ಣವ ಮುಚ್ಚಿಕೊಂಡು ಶಿವಮಂತ್ರವ ಜಪಿಸುವುದು.
ಅಷ್ಟೂ ಆಗದಿದ್ದಡೆ, ಆ ಸ್ಥಳವ ಬಿಡುವುದು
ಅದಲ್ಲದಿದ್ದಡೆ, ಕುಂಭೀಪಾತಕನಾಯಕನರಕದಲ್ಲಿಕ್ಕುವ
ಶ್ರೀ ಗುರುಸಿದ್ದೇಶ್ವರನು.[27]

ರೇಕಮ್ಮ ಶಿವಭಕ್ತಿ ಇಲ್ಲದವನ, ಆಚಾರಭ್ರಷ್ಟನ, ವ್ರತತಪ್ಪುವನ, ಸ್ವಲ್ಪವೂ ಲೆಕ್ಕಿಸದೆ ಧಿಕ್ಕರಿಸಿ, ಶಕ್ತಿಯಿದ್ದರೆ ಸಂಹಾರವ ಮಾಡುವುದು, ಎಂದಿದ್ದಾಳೆ. ಹೀಗೆ ಶಕ್ತಿಯುಳ್ಳಡೆ ಎನ್ನುವಾಗ ತನಗೆ ಆ ಶಕ್ತಿಯಿಲ್ಲವಾದ ಕಾರಣ ಶಕ್ತಿ ಉಳ್ಳವರಲ್ಲಿ ಕೇಳಿಕೊಳ್ಳುವಂತೆಯೂ, ಶಕ್ತಿಯಿಲ್ಲದಿದ್ದಡೆ ಎನ್ನುವಾಗ ಅಮೂರ್ತ ನೆಲೆಯಲ್ಲಿ ತನ್ನ ವಿರೋಧವನ್ನು ವ್ಯಕ್ತಪಡಿಸಿದಂತೆಯೂ ತೋರಿಬರುತ್ತದೆ. 'ಅಷ್ಟೂ ಆಗದಿದ್ದಡೆ' ಎನ್ನುವಾಗ ಆ ಕಾಲದಲ್ಲಿ ಸ್ತ್ರೀಯರ ಮಾತಿಗೆ ದೊರೆಯುತ್ತಿದ್ದ ಬೆಲೆಯನ್ನು ಸೂಚಿಸುವಂತಿದೆ. ಒಟ್ಟಿನಲ್ಲಿ ತಪ್ಪಿದಾಗ ತಿದ್ದುವಲ್ಲಿ ಹಾಗೂ ವಿರೋಧಿಸುವಲ್ಲಿ ಯಾವ ಮಾದರಿಯಾದರೇನು ಪರಿಹಾರ ಸೂಚಿಸುವುದು ಮುಖ್ಯ ಕರ್ತವ್ಯವಾಗಬೇಕೆಂಬುದು ರೇಕಮ್ಮನ ಆಶಯವಾಗಿದೆ.

ಭಕ್ತಿಯ ಪ್ರಧಾನಭಾವವೇ ಏಕಮುಖಿ ವ್ಯಕ್ತಿತ್ವವೆನ್ನುವ ವಚನಕಾರ್ತಿಯರಲ್ಲಿ ಅಂತರಂಗ-ಬಹಿರಂಗಗಳ ವಿದ್ಯಮಾನಗಳ ತುಡಿತ ಬಹಳ ಮುಖ್ಯವಾದ ಸ್ಥಾನವನ್ನು ಪಡೆಯುತ್ತದೆ.

ಹೀಗೆ ಹೆಣ್ಣಿಗೆ ಅಸಾಧ್ಯವೆಂದು ಭಾವಿಸಿದ್ದ ದೈವತ್ವ ಸಾಧನೆಯನ್ನು ವಚನಕಾರ್ತಿಯರು ಮಾಡಿ ತೋರಿಸಿದರು.

ವಚನಕಾರ್ತಿಯರಲ್ಲಿ ಭಕ್ತಿಯ ಗ್ರಹಿಕೆ ರೂಪುಗೊಂಡ ಬಗೆ:

ಸಮಾಜದಲ್ಲಿ ಬಹುಹಿಂದಿನಿಂದಲೂ ಲಿಂಗಭೇದ ಕಲ್ಪಿಸುವುದರ ಮೂಲಕ ಸ್ತ್ರೀಯರ ಮೇಲೆ ಶೋಷಣೆ ನಡೆಸಿ, ಅವಳ ಸ್ಥಾನಮಾನವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದುದು ತಿಳಿದ ಸಂಗತಿ. ಆದರೆ ವಚನ ಚಳುವಳಿಯ ಸಂದರ್ಭದಲ್ಲಿ ಆಶ್ಚರ್ಯ ಮೂಡಿಸುವಂತೆ ಹೊಸಬಗೆಯಲ್ಲಿ ಸ್ತ್ರೀಯನ್ನು ಕಾಣಲಾಯಿತು. ಭಕ್ತಿಯ ಜ್ಞಾನಕ್ರಿಯೆಗೆ ಅವಶ್ಯಕವಾದ ಲಿಂಗದೀಕ್ಷೆ, ವಿಭೂತಿಧಾರಣೆ, ಉದ್ಯೋಗಾವಕಾಶ, ವಿದ್ಯೆ ಹೀಗೆ ಎಲ್ಲಾ ವಿಚಾರಗಳಲ್ಲಿ ಮುಕ್ತ ಅವಕಾಶನೀಡಿದರು.

ಭಕ್ತಿಯ ವಿಧಿಗಳಲ್ಲಿ ಪುರುಷರಷ್ಟೇ ಸ್ತ್ರೀ ಸಮಳೆಂದರು. ಹೀಗೆ ಹಿಂದೆ ಇದ್ದ ಅಪವಿತ್ರ ಭಾವವನ್ನು ಶಾಶ್ವತವಾಗಿ ತೊಡೆದುಹಾಕಲು ಮುಂದಾಗಿದ್ದು ಆ ಕಾಲಕ್ಕೆ ಜಾಗೃತಿ ಹೊಂದಿದ ಶರಣರ ಮನಸ್ಥಿತಿಯನ್ನು ತಿಳಿಸುತ್ತದೆ.

"ವಚನಕಾರರಿಗೆ ಭಕ್ತಿ ಕೇವಲ ದೇವರ ಪೂಜೆಯ ವಿಧಾನವಾಗಿರಲಿಲ್ಲ. ಅದು ಸಂವಹನದ ಮುಖ್ಯ ಮಾಧ್ಯಮವಾಗಿತ್ತು. ಅದೊಂದು ಭಾಷೆಯಾಗಿತ್ತು. ಹನ್ನೆರಡನೆಯ ಶತಮಾನದ ಕಾಲದಲ್ಲಿ ಆ ಭಾಷೆ ಎಲ್ಲರಿಗೂ ಅರ್ಥವಾಗುತ್ತಿತ್ತು. ಅಂತೆಯೇ ವಚನಕಾರರು ಆ ಭಾಷೆಯ ಮೂಲಕವೇ ತಮ್ಮ ಧಾರ್ಮಿಕ ಸಾಮಾಜಿಕ ಚಿಂತತನೆಗಳನ್ನು ಅಭಿವ್ಯಕ್ತಿಸಿದರು".[28] ಎಂದು ಗಿರಡ್ಡಿ ಗೋವಿಂದರಾಜುರವರು ಅಭಿಪ್ರಾಯಪಟ್ಟಿರುವಂತೆ ಸ್ತ್ರೀಯರ ಸುತ್ತ ಇದ್ದ ಅಪವಾದವನ್ನು ಒಡೆದು ಹಳೆಯ ಕಟ್ಟುಪಾಡುಗಳನ್ನು ಕಳೆದು ಅವಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟರು. ವಚನಕಾರರು ಸ್ತ್ರೀ ಪುರುಷರು ಪ್ರಾಪಂಚಿಕ ಹಾಗೂ ಪಾರಮಾರ್ಥಿಕ ಸ್ತರದಲ್ಲಿ ಮುಕ್ತರೆಂದು, ಸರ್ವಸಮಾನತೆಯನ್ನು ಸ್ಥಾಪಿಸಿದರು.

ಅದರಂತೆ ಸ್ತ್ರೀಯರು ತಮಗೆ ದೊರೆತ ಸರ್ವಸಮಾನತೆಯ ಸ್ವಾತಂತ್ರ್ಯವನ್ನು ಸದ್ವಿನಿಯೋಗ ಮಾಡಿಕೊಂಡರೆಂಬುವಕ್ಕೆ ಅವರ ವಚನಗಳೆ ಸಾಕ್ಷಿಯಾಗಿ ನಿಂತಿವೆ.

**ಅಡಿಟಿಪ್ಪಣಿ**

1. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-2 ಧರ್ಮ-> ರಹಮತ ತರೀಕೆರೆ ಪುಟ-258
2. ವಿಶ್ವವಿಜೇತ ವಿವೇಕಾನಂದ - ಸ್ವಾಮಿ ಪುರುಷೋತ್ತಮಾನಂದ ಪುಟ-391
3. Oxford dictionary. Thesaurus word power guide Pg-1058
4. ವೀರಶೈವ ಪಾರಿಭಾಷಿಕ ಪದಕೋಶ- ಸಂ. ಡಾ॥ ವಿದ್ಯಾಶಂಕರ - ಪುಟ-384
5. ಬಸವಣ್ಣನವರ ವಚನಗಳು-ಸಂ. ಡಾ॥ ಆರ್.ಸಿ. ಹಿರೇಮಠ-ಪುಟ 96, ವಚನ.231
6. ಬಸವಣ್ಣನವರ ವಚನಗಳು-ಸಂ. ಡಾ॥ ಆರ್.ಸಿ. ಹಿರೇಮಠ- ಪುಟ 58. ವಚನ 26
7. ಅಕ್ಕನ ವಚನಗಳು-ಡಾ॥ ಎಲ್.ಬಸವರಾಜು ಪುಟ. 85. ವಚನ 147
8. ಅಕ್ಕನ ವಚನಗಳು-ಡಾ॥ ಎಲ್.ಬಸವರಾಜು ಪುಟ. 68. ವಚನ 83
9. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.133 ವಚನ 6
10. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.136 ವಚನ15
11. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.151 ವಚನ57
12. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.186 ವಚನ2
13. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.198 ವಚನ45
14. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.204 ವಚನ 67
15. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.219 ವಚನ 1

16. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.221 ವಚನ 12
17. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.226 ವಚನ 6
18. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.227 ವಚನ 8
19. ಶಿವಶರಣೆಯರ ವಚನ ಸಂಪುಟ ಡಾ॥ ವೀರಣ್ಣ ರಾಜೂರ ಪುಟ.269 ವಚನ 47
20. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಸಂ. ಡಾ॥ ಎಚ್.ಎಸ್. ಶ್ರೀಮತಿ ಪುಟ.117
21. ಶಿವಶರಣೆಯರ ವಚನ. ಸಂ. ಡಾ॥ ವೀರಣ್ಣ ರಾಜೂರ ಪುಟ.322 ವಚನ.1
22. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಸಂ. ಡಾ॥ ಎಚ್.ಎಸ್. ಶ್ರೀಮತಿ ಪುಟ. 154
23. ಶಿವಶರಣೆಯರ ವಚನ. ಸಂ. ಡಾ॥ ವೀರಣ್ಣ ರಾಜೂರ ಪುಟ.338 ವಚನ.7
24. ಶಿವಶರಣೆಯರ ವಚನ. ಸಂ. ಡಾ॥ ವೀರಣ್ಣ ರಾಜೂರ ಪುಟ.330 ವಚನ.18
25. ಶಿವಶರಣೆಯರ ವಚನ. ಸಂ. ಡಾ॥ ವೀರಣ್ಣ ರಾಜೂರ ಪುಟ.367 ವಚನ.9
26. ಶಿವಶರಣೆಯರ ವಚನ. ಸಂ. ಡಾ॥ ವೀರಣ್ಣ ರಾಜೂರ ಪುಟ.412 ವಚನ.108
27. ಇಪ್ಪತ್ತೇಳು ಶಿವಶರಣೆಯರ ವಚನಗಳು ಸಂ. ಡಾ॥ ಆರ್.ಸಿ. ಹಿರೇಮಠ ಪುಟ. 96. ವಚನ 204
28. ಸಮಗ್ರ ವಿಮರ್ಶೆ–ಡಾ॥ ಗಿರಡ್ಡಿ ಗೋವಿಂದರಾಜು ಪುಟ. 201

# ಅಧ್ಯಾಯ – 2

## ವಚನಕಾರ್ತಿಯರಲ್ಲಿ ಕಾಯಕ ಮತ್ತು ವೃತ್ತಿಪರಿಭಾಷೆ ಪ್ರತಿಭಟನೆಯ ಸ್ವರೂಪದ ಹಿನ್ನೆಲೆಯಲ್ಲಿಯಾಗಿದೆ.

ಕಾಯಕ ಅಥವಾ ಕೆಲಸವು ಪರಿಶ್ರಮ, ಕಾರ್ಯ, ನಡೆಸು, ದೇಹಕ್ಕೆ ಸಂಬಂಧಿಸಿದ ಚಟುವಟಿಕೆ ಎಂಬ ಅರ್ಥಗಳನ್ನು ಹೊಂದಿದ್ದು ಸಾಮಾಜಿಕ ಹಾಗೂ ಆರ್ಥಿಕ ಗುಣಮಟ್ಟಗಳನ್ನು ಸುಧಾರಿಸಲು ನಡೆಸುವ ಚಟುಟವಿಕೆಯಾಗಿದೆ. ಜೊತೆಗೆ ಸಮಾಜವೊಂದರ ಮುಂದುವರಿಕೆಗೆ, ಅಗತ್ಯವಿರುವ ಶ್ರಮ ಎಂತಲೂ ಅರ್ಥೈಸಬಹುದು.

ಮನುಷ್ಯ ತನ್ನ ಉಳಿವಿಗಾಗಿ ಪ್ರಾಚೀನ ಕಾಲದಿಂದಲೂ ಕೆಲಸ ಮಾಡುತ್ತಲೇ ಬಂದಿದ್ದಾನೆ. ಕಾಲಕ್ರಮೇಣ ಕೆಲಸದ ಉದ್ದೇಶದಲ್ಲಿ ಬದಲಾವಣೆಯಾಗಿ, ತನ್ನ ವೈಯಕ್ತಿಕ ಬೆಳವಣಿಗೆಗೆ ಹೆಚ್ಚು ಗಳಿಸುವ, ಗಳಿಸಿದ್ದರಲ್ಲಿ ಉಳಿಸಿ ಕೂಡಿಹಾಕುವ, ಉನ್ನತ ಹುದ್ದೆಯ ಬಯಸುವ, ಬಯಸಿ ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳುವ ಯೋಜನೆಯನ್ನು ರೂಪಿಸಿಕೊಂಡನು.

ಕಾಯಕಕ್ಕೆ ವಚನ ಚಳುವಳಿಯು ಹೊಸ ಬಗೆಯ ಆಲೋಚನೆ ಹಾಗೂ ವಿಚಾರಧಾರೆಯನ್ನು ಮೂಡಿಸಿತು. ಪರಿಶ್ರಮಕ್ಕೆ ಮಹತ್ವದ ಬೆಲೆಯನ್ನು ಕೊಡುವ ಮೂಲಕ ಸಮಾಜದಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಸಮಾನತೆಯನ್ನೂ ತರುವುದು ಅವರ ಮುಖ್ಯ ಆಶಯವಾಯಿತು. ಅಂದರೆ, ಸಂಪಾದಿಸುವ, ಸಂಪಾದಿಸಿದ್ದನ್ನು ಸದ್ವಿನಿಯೋಗ ಮಾಡುವ ಆಶಯವನ್ನು ಹೊತ್ತು ಸಮರ್ಪಣ ಭಾವದಿಂದ ಕಾಯಕ ತತ್ವಗಳನ್ನು ಆಚರಣೆಗೆ ತಂದರು.

ವೃತ್ತಿಪರಿಭಾಷೆ ಎಂದರೆ, ಕಾಯಕಕ್ಕೆ ಸಂಬಂಧಿಸಿದ ರೂಪಕಗಳು ಅಂದರೆ, ಕೈಗೊಂಡ ವೃತ್ತಿಯಲ್ಲಿ ಬರುವ ವೃತ್ತಿ ಸೂಚಕ ಶಬ್ದಗಳಾಗಿವೆ. ಪ್ರತಿಯೊಂದು ವೃತ್ತಿಗೂ ತನ್ನದೇ ಆದ ವೈವಿಧ್ಯವಾದ ವೃತ್ತಿಸೂಚಕಗಳಿದ್ದು, ಸಾಮಾನ್ಯವಾಗಿ ಜನರಾಡುವ ಅಥವಾ ಬಳಸುವ ಪದಗಳಿಗಿಂತ ಭಿನ್ನವಾಗಿಲ್ಲಿ ಬಳಕೆಯಾಗುತ್ತದೆ.

ವಚನಕಾರರಲ್ಲೂ ವೃತ್ತಿಪರಿಭಾಷೆಯ ಪರಿಕಲ್ಪನೆಯನ್ನು ಕಾಣಬಹುದಾಗಿದೆ. ಯಾವುದೇ ಕೆಲಸದ ಅಂತಿಮ ಗುರಿ ಒಂದೇ ಆಗಿರುವುದರಿಂದ ಯಾವ ವೃತ್ತಿಯು ಶ್ರೇಷ್ಠ ಕನಿಷ್ಟವಲ್ಲವೆಂದು ತಮ್ಮನ್ನು ತಮ್ಮ ತಮ್ಮ ವೃತ್ತಿ ಮುಖೇನ ಗುರುತಿಸಿಕೊಂಡು ಈ ಹಿಂದೆ ಇದ್ದ ವೃತ್ತಿ ಶ್ರೇಣೀಕರಣವನ್ನು ಅಲ್ಲಗಳೆದರು. ಅಷ್ಟೇ ಅಲ್ಲದೆ ಜಾತಿ ಆಧಾರಿತ ವೃತ್ತಿ ವ್ಯವಸ್ಥೆಯನ್ನು ವಿರೋಧಿಸಿ ಯೋಗ್ಯತೆ ಹಾಗೂ ತಮ್ಮ ಆಸಕ್ತಿಯಾನುಸಾರ ತಮ್ಮ ವೃತ್ತಿಯನ್ನು ಆಯ್ದುಕೊಂಡರು.

ವಚನಕಾರರು ಈ ಹಿನ್ನೆಲೆಯಲ್ಲಿ ಸರ್ವೋದಯ ಶ್ರಮದಿಂದ ಎಂಬ ಪರಿಕಲ್ಪನೆಯನ್ನು ಹುಟ್ಟುಹಾಕಿದರು. ವ್ಯಕ್ತಿಗೆ ಗೌರವ ಬರುವುದು ಆತನ ಜೀವನ ಮೌಲ್ಯಗಳಿಂದಲೇ ಹೊರತು ಆತನ ವೃತ್ತಿಯಿಂದಲ್ಲ ಎಂಬುದನ್ನು ಪ್ರತಿಪಾದಿಸಿದರು.

ಉನ್ನತ ವೃತ್ತಿ ಹಾಗೂ ಅಧಿಕಾರ ಪಡೆದವರಲ್ಲಿ ದುರ್ಬಲರೂ ಹಾಗೂ ಮಹಿಳೆಯರು ಶೋಷಣೆಗೊಳಗಾದ ಸಾಧನವಾಗಿದ್ದ ಸಂದರ್ಭದಲ್ಲಿ ಸಕಲ ಕಾಯಕವು ಪವಿತ್ರವೆಂದು ತಿಳಿದು ಕರ್ತವ್ಯನಿರ್ವಹಿಸುವಲ್ಲಿ ಸಮಾನ ಕಾಯಕ ಧರ್ಮವನ್ನು ವಚನಕಾರರು ಹಾಗೂ ವಚನ ಕಾರ್ತಿಯರು ಹುಟ್ಟುಹಾಕಿದರು.

Robert Louis Stevenson ಇದೇ ಅಭಿಪ್ರಾಯದಿಂದ ಹೇಳಿರುವ ಮಾತು ಹೀಗಿದೆ.

"If a man love the labour of any trade, apart from any question of success or fame the Gods have called him" [1]

(ಇಂಗ್ಲೀಷ್ ಅನುವಾದ) ಒಬ್ಬ ವ್ಯಕ್ತಿಯು ಯಾವುದೇ ವೃತ್ತಿಯಲ್ಲಿ ನಿರತನಾಗಿರುವ ಕೆಲಸಗಾರನ ಸಾಧನೆಗೆ ಮಾನ್ಯತೆ ಕೊಡದೆ, ವೃತ್ತಿಯಿಂದ ಅವನಲ್ಲಿ ಭೇಧವನ್ನು ಎಣಿಸದೆ ಕರ್ತವ್ಯದಲ್ಲಿ ನಿರತನಾದ ತನ್ನ ಕೆಲಸಗಾರನನ್ನು ಪ್ರೀತಿಸುವನೋ ಅಂತಹವನನ್ನು ದೇವರು ಕರೆಸಿಕೊಳ್ಳುವನು. ಇಲ್ಲಿ ಧರ್ಮಯುತವಾದ ಕಾಯಕದಲ್ಲಿ ಭಕ್ತಿಯು ಇರುವುದೆಂದು ಸ್ಟೀವನ್‌ಸನ್ ಅಭಿಪ್ರಾಯಪಟ್ಟಿರುವಂತಿದೆ.

**ಕಾಯಕ ಮತ್ತು ವೃತ್ತಿಪರಿಭಾಷೆ**

ಅಪ್ರಮಾಣಿಕತೆ, ಸಂಗ್ರಹಬುದ್ಧಿ, ಸ್ವಾರ್ಥಸಾಧನೆಗಳು ಮನುಷ್ಯರ ಮನಸ್ಸಿನಲ್ಲಿ ವಂಚಿಸುವ ಬೀಜವನ್ನು ಬಿತ್ತುವುವು ಎಂದು ಮನಗಂಡಿದ್ದ ವಚನಕಾರರು ಕಾಯಕದಲ್ಲಿ ತನ್ಮಯತೆ ಪ್ರಾಮಾಣಿಕತೆ, ನಿರ್ವಂಚನೆಯಿಂದಿರಬೇಕಾದ ಅವಶ್ಯಕತೆಯ ಬಗೆಗೆ ಕಾಳಜಿಮಾಡಿದರು. ಪ್ರತಿಯೊಬ್ಬರಿಗೂ ಸಂಪತ್ತು ಅವಶ್ಯವಾದರೂ ಆದರ್ಶರಹಿತ ಆದಾಯ ದುಃಖದ ಕೂಪಕ್ಕೆ ತಳ್ಳುತ್ತದೆಂದು ತಮ್ಮ ವಚನಗಳ ಮೂಲಕ ಮನವರಿಕೆ ಮಾಡಿಕೊಡಲು ಮುಂದಾದರು.

ವಚನಕಾರರು ಕಾಯಕವು ಸತ್ಯಶುದ್ಧಿಯಿಂದ ಸರ್ವಸಮರ್ಪಣಭಾವದಿಂದ ಕೂಡಿರಬೇಕೆನ್ನುವರು. ಏಕೆಂದರೆ, ಹೊಟ್ಟೆ ಹೊರೆಯಲು ಮಾಡುವ ಮೋಸ, ವಂಚನೆ, ಅನ್ಯಾಯ, ಕೊಲೆ-ಸುಲಿಗೆಗಳು ವೃತ್ತಿಯೆನಿಸವು. ವ್ಯಕ್ತಿಯೊರ್ವನ ಗುರಿಯಷ್ಟೇ ಅವನು ತನ್ನ ಗುರಿ ತಲುಪಲು ಅಳವಡಿಸಿಕೊಂಡ ಮಾರ್ಗವೂ ಅಷ್ಟೇ ಮುಖ್ಯವಾಗಿರುತ್ತದೆ. ಜೊತೆಗೆ ಆತನು ತನಗೆ ದೊರೆತ ಪ್ರತಿಫಲವನ್ನು ಪುನಃ ಬಳಸಿಕೊಳ್ಳುವ ವಿಧಾನವೂ ಅಷ್ಟೇ ಪ್ರಾಮುಖ್ಯತೆ ಉಳ್ಳದ್ದೆನ್ನುತ್ತಾರೆ.

ವಚನಕಾರರ ಕಾಯಕ ತತ್ವ ಸಮಾಜದ ತಾರತಮ್ಯಭಾವವನ್ನು ಕಳೆದು ಸುಂದರವಾದ ಪ್ರಗತಿಪರ ಮಾನವತಾವಾದಿ ಸಮಾಜವನ್ನು ಕಟ್ಟುವೆಡೆಗೆ ಒಲವು ತೋರಿತು. ಅದರೊಂದಿಗೆ ವೃತ್ತಿ ಪರಿಭಾಷೆಯ ಪರಿಕಲ್ಪನೆಯೂ ಕೂಡ ಕ್ರಾಂತಿಕಾರಕ ಗುಣದಿಂದ ಸಮಾನತೆಯನ್ನು ಸಾಧಿಸಲು ಮಾಡಿಕೊಂಡ ಕಾಯಕತತ್ವವೇ ಆಗಿರುವಂತೆ ತೋರುತ್ತದೆ. ವಚನ ರಚನೆಯ ಸಂದರ್ಭದಲ್ಲೂ ತಮ್ಮ ವೃತ್ತಿ ಸಂಬಂಧಿತ ವಿಚಾರಗಳನ್ನು ತಂದು ಕೀಳೆಂದು ಭಾವಿಸುತ್ತಿದ್ದ ವೃತ್ತಿಗಳಿಗೆ ಮಹತ್ವವನ್ನು ತಂದು ಕೊಟ್ಟರು. ಈ ನಿಟ್ಟಿನಲ್ಲಿ ಕನ್ನಡಿ ಕಾಯಕದ ರೇಮಮ್ಮ ತನ್ನ ಕಾಯಕದ ಅನುಭವದ ರೂಪಕವನ್ನು ಬಳಸಿಕೊಂಡು ಮಾತನಾಡಿರುವ ರೀತಿಯೊಂದನ್ನಿಲ್ಲಿ ಗಮನಿಸಬಹುದಾಗಿದೆ.

ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೆ?
ಲಿಂಗ ಜಂಗಮದ ಪ್ರಸಾದಕ್ಕೆ ತಪ್ಪಿದಲ್ಲಿ ಕೊಲ್ಲಬಾರದೆ?
ಕೊಂದೆಡೆ ಮುಕ್ತಿಯಿಲ್ಲವೆಂಬವರ ಬಾಯಲ್ಲಿ
ಪಡಿಹಾರನ ಪಾದರಕ್ಷೆಯನಿಕ್ಕುವೆ.
ಮುಂಡಿಗೆಯನೆತ್ತಿರೊ ಭ್ರಷ್ಟ ಭವಿಗಳಿರಾ.
ಎತ್ತಲಾರದಡೆ ಸತ್ತ ಕುನ್ನಿ ನಾಯ ಬಾಲವ
ನಾಲಿಗೆ ಮುರುಟಿರೋ ಸದ್ಗುರಸಂಗ ನಿರಂಗ ಲಿಂಗದಲ್ಲಿ||[2]

**ಕಾಯಕ - ಕೈಲಾಸ**

"ಕಾಯಕವೇ ಕೈಲಾಸ" ವೆಂಬ ಪರಿಕಲ್ಪನೆಯನ್ನು ಬಸವಣ್ಣನವರು ಹುಟ್ಟುಹಾಕಿದರು. ಶ್ರಮದ ಬೆಲೆಯನ್ನು ಸಾರಿ ಸಾಮಾನ್ಯ ಜನರು ವೃತ್ತಿಯನ್ನು ಕೈಗೊಳ್ಳುವಂತೆ ಪ್ರೇರಣೆ ನೀಡಿದ ರೊಂದಿಗೆ ಸಂಪಾದಿಸಿದ್ದನ್ನು ಪುನಃ ಸದ್ವಿನಿಯೋಗ ಮಾಡಬೇಕೆಂದರು.

ಅವಶ್ಯಕತೆಗಿಂತ ಹೆಚ್ಚು ಸಂಗ್ರಹಿಸಿದರೆ ಇಲ್ಲದವರ ಕಣ್ಣುಕುಕ್ಕಿ ಸಮಾಜದ್ರೋಹದಂತಹ ಪಾತಕಕೃತ್ಯಗಳು ಹೆಚ್ಚುತ್ತವೆಂದು ಅರಿತಿದ್ದ ಬಸವಣ್ಣ ಎಂದಿಗೂ ನಾಳೆಗಾಗಿ ಕೂಡಿಡುವುದಿಲ್ಲವೆಂಬ ಸಂಕಲ್ಪ ಕೈಗೊಂಡರು. ಅಲ್ಲದೆ ಹಿರಿಯರು ಕೂಡಿಟ್ಟು ಕಿರಿಯರಲ್ಲಿ ಸೋಮಾರಿತನವನ್ನು ಹುಟ್ಟು ಹಾಕುವರೆಂದು, ಕೂಡಿಟ್ಟವನಲ್ಲೂ ಪ್ರತಿಷ್ಠೆ, ಸ್ವಾರ್ಥ ಸಾಧನೆ ತಲೆದೋರಿ ಅಪಾಯಕಾರಿ ವಾತಾ ವರಣ ನಿರ್ಮಾಣವಾಗುತ್ತದೆಂಬುದನ್ನು ಮನಗಂಡಿದ್ದರು. ಆ ಕಾರಣ ಕೂಡಿಡುವ ಸಂಸ್ಕೃತಿ ಯನ್ನು ನಿರಾಕರಿಸಿ ದಾಸೋಹ ತತ್ವವನ್ನು ತಮ್ಮ ಹೋರಾಟದ ಮುಂಚೂಣಿಯಲ್ಲಿರಿಸಿ ಕೊಂಡರು. ಈ ನಿಟ್ಟಿನಲ್ಲಿ ಈ ಕೆಳಕಂಡ ವಚನ ಇಂದಿಗೂ ಅನುಕರಣೀಯವಾಗಿದೆ.

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ನಿಮ್ಮ ಶರಣಗಲ್ಲದೆ ಮತ್ತೊಂದನರಿಯೆ
ಕೂಡಲ ಸಂಗಮದೇವಾ|| [3]

ಶರಣರಿಗೆ ಕಾಯಕವೆಂಬುದು ಗೌರವಾಭಿಮಾನದ ಸಂಗತಿಯಾಗಿತ್ತು. ಆ ಕಾರಣ ಕಾಯಕಕ್ಕೆ ಮಹತ್ವ ನೀಡಿ ಅವರ ಜಾತಿ, ಅಂತಸ್ತು, ವಿದ್ಯೆ, ಅಧಿಕಾರಕ್ಕೆ ಮನ್ನಣೆ ನೀಡದಾದರು. ಪ್ರಧಾನ ಅಧೀನ ಸಂಸ್ಕೃತಿಯೆನ್ನದೆ ಕಾಯಕಕ್ಕೆ ವಿಶೇಷ ಮನ್ನಣೆಯನ್ನು ದೊರಕಿಸಿಕೊಟ್ಟರು.

ಬಸವಣ್ಣನವರ ವಿಚಾರಧಾರೆಯಿಂದ ವಿವೇಚನೆ ಹೊಂದಿ ಸರ್ವರೂ ಸ್ವಾಭಿಮಾನ ದಿಂದಲೇ ಕಾಯಕ ನಿರತರಾದರು. ಕಾಯಕವು ಅಭಿಮಾನವಾಗಿ ಬೆಳೆದುದರ ಕುರುಹಾಗಿ ಜನಸಾ ಮಾನ್ಯರೂ ಯಾವುದೇ ಕಾಯಕವಾಗಲೀ ದುಡಿಮೆಯಲ್ಲಿ ಉದಾತ್ತಧ್ಯೇಯ, ಸತ್ಯ, ನಿರ್ವಂಚನೆ ಗಳಿಂದ, ಸರ್ವೋದಯ ಹಾಗೂ ಸರ್ವ ಸಮಾನತೆ ಸಾಧ್ಯವಾಗುವುದೆಂಬುದನ್ನು ಅರಿತು ನಡೆದರು.

**ವಚನಕಾರ್ತಿಯರಲ್ಲಿ ಕಾಯಕಪ್ರಜ್ಞೆ ಹಾಗೂ ವೃತ್ತಿಪರಿಭಾಷೆಯಲ್ಲಿನ ಪರಿಕಲ್ಪನೆಯ ಸ್ವರೂಪಗಳು :-**

ಕಾಯಕಕ್ಕೆ ಸ್ತ್ರೀಯರೇನು ಹೊರತಾಗಿರಲಿಲ್ಲ. ವಚನ ಚಳುವಳಿಯಲ್ಲಿ ಕಾಯಕದ ಸಮಗ್ರವಿಚಾರ ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾಗಿ ಅನ್ವಯವಾಗುತ್ತಿತ್ತು. ಸ್ತ್ರೀಯರಲ್ಲಿ ಕಾಯಕವೆನ್ನುವಾಗ ಒಂದು ಕೌಟುಂಬಿಕ ನೆಲೆಯಾದರೆ, ಮತ್ತೊಂದು ಆರ್ಥಿಕ ವಲಯದಲ್ಲಿ ಸಬಲಳಾಗುವುದಾಗಿದೆ.

ಈ ಮೊದಲು ಸಮಾಜ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಮಹಿಳೆಯರಿಗೆ ಯಾವುದೇ ಬಗೆಯ ಅವಕಾಶವನ್ನೂ ಕೊಟ್ಟಿರಲಿಲ್ಲ. ಆದರೆ ಹನ್ನೆರಡನೆಯ ಶತಮಾನದಲ್ಲಿ ವಚನಕಾರರು ಮಹಿಳೆಯರಿಗೆ ಪ್ರಾಮುಖ್ಯತೆ ನೀಡಿ ಧಾರ್ಮಿಕ, ಸಾಮಾಜಿಕ, ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಟ್ಟಸಲುವಾಗಿ ತಮ್ಮ ಅಳಿದುಳಿದ ಬದುಕಿನಲ್ಲಿ ಬೆಳಕ ಕಂಡರೆನ್ನಬಹುದು.

ಅಸ್ಪೃಶ್ಯಳಂತೆ ಕಾಣುತ್ತಿದ್ದ ಜಗಿ ವ್ಯವಸ್ಥೆಯಲ್ಲಿ ದುಡಿಯುವ ಹಕ್ಕನ್ನು ಅವಳಿಗೆ ನೀಡಿ, ಮಹಿಳೆಯರನ್ನು ಎಲ್ಲ ವಿಷಯಗಳಲ್ಲೂ ಪುರುಷನಿಗೆ ಸರಿಸಮಾನವಾಗಿ ಬೆಳೆಯುವಂತೆ ಮಾಡಿದ್ದು ಹಾಗೂ ಹೆಚ್ಚಿನ ಸ್ಥಾನಮಾನವನ್ನು ನೀಡಿದ್ದು ಶರಣರ ವಿಶಾಲ ಮನೋಭಾವಕ್ಕೆ ಸಾಕ್ಷಿಯಾಗಿದೆ.

**ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ**

ಕಾಳವ್ವೆ ಒಬ್ಬ ದಲಿತ ವಚನಕಾರ್ತಿ, ಕಾಯಕವನ್ನು ಕೈಕೊಳ್ಳದೆ ಎಂದಿಗೂ ಕುಂತುಂಡೆನೆನ್ನುವ ಸ್ವಾಭಿಮಾನಿಯಾಗಿದ್ದಾಳೆ.

ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ
ಸತ್ಯಶುದ್ಧವಿಲ್ಲದುದು ಕಾಯಕವಲ್ಲ
ಆಸೆಯೆಂಬುದು ಭವದ ಬೀಜ
ನಿರಾಸೆಯೆಂಬುದು ನಿತ್ಯಮುಕ್ತಿ
ಉರಲಿಂಗ ಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ॥[4]

ಇವಳ ಪ್ರಕಾರ ಭಕ್ತನೆನಿಸಿಕೊಳ್ಳಲು ವ್ರತಾಚರಣೆ ಮಾಡಬೇಕಾಗಿಲ್ಲ. ಸತ್ಯಶುದ್ಧವಾದ ಕಾಯಕದಲ್ಲಿ ನಿರತನಾದರೆ ಸಾಕೆಂದು. ಕಾಯಕಕ್ಕೆ ಮಹತ್ವವನ್ನು ನೀಡುವಲ್ಲಿಯೇ ಮುಕ್ತಿಸಾಧನೆಗಾಗಿ ದೇವರನ್ನು ಆಚರಿಸಲೇ ಬೇಕೆನ್ನುವವನು ತನ್ನ ಕರ್ತವ್ಯದಲ್ಲೂ ನಿಷ್ಠೆಯುಳ್ಳವನಾಗಿರಬೇಕೆನ್ನುತ್ತಾಳೆ. ಅತಿಯಾಸೆಯನ್ನು ತೊರೆದು ನಿತ್ಯಮುಕ್ತರಾಗಬೇಕೆನ್ನುವ ಸಂದೇಶವನ್ನು ಈ ವಚನದಲ್ಲಿ ಕಾಣಬಹುದು.

**ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ**

ಕಾಳವ್ವೆ ಕಾಯಕ ತಪ್ಪಿದರೆ ಸಹಿಸಬಾರದೆಂದು, ಕಾಯಕ, ನಡೆ-ನುಡಿ, ವ್ರತಗಳು ಒಂದಕ್ಕೊಂದು ಪೂರಕವಾಗಿವೆ ಎನ್ನುತ್ತಾಳೆ. ಇವುಗಳಲ್ಲಿ ಏಕಾಗ್ರತೆಯಿಲ್ಲದೆ ತಪ್ಪಿ ನಡೆದರೆ ನರಕ ಪ್ರಾಪ್ತಿಯಾಗುವುದೆಂದು ತನ್ನ ಅನುಭವದ ಹಿನ್ನೆಲೆಯಲ್ಲಿಯೇ ಮಾತನಾಡುತ್ತಾಳೆ. ಹಳೆಯ ಸಂಪ್ರದಾಯವನ್ನು ಪಾಲಿಸದೇ ಕೈಕೊಂಡ ಕಾಯಕ, ವ್ರತ, ಮಾತಿನಲ್ಲಿ ಪರಿಶುದ್ದನಾಗಿದ್ದರೆ, ಸಾರ್ಥಕತೆ ದೊರೆಯುವುದಾಗಿ ಕಾಳವ್ವೆ ನಂಬಿದಂತೆ ತೋರುತ್ತದೆ.

ಕೈತಪ್ಪಿ ಕೆತ್ತಲು ಕಾಲಿಗೆ ಮೂಲ
ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ
ವ್ರತಹೀನನ ನೆರೆಯಲು ನರಕಕ್ಕೆ ಮೂಲ
ಕರ್ಮಹರ ಕಾಳೇಶ್ವರಾ॥[5]

**ಸತ್ಯಕ್ಕ**

ಭಕ್ತಿ ಹಾಗೂ ಕಾಯಕದಲ್ಲಿ ದೃಢನಿಷ್ಠೆ ಹೊಂದಿ ಕಸಗುಡಿಸುವ ಕಾಯಕವನ್ನು ಕೈಗೊಂಡು ಏಕದೇವತಾರಧನೆಯ ಪ್ರತಿಪಾದಕಳಾಗಿದ್ದಳು.

"ಬಸವಣ್ಣನವರ ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡಲಿ ಬಡವನಯ್ಯಾ" ಎಂದು ಬಡವರ ಪರವಾಗಿ ಮಾತನಾಡಿರುವಂತೆ ಸತ್ಯಕ್ಕ ಮಂತ್ರ-ತಂತ್ರ, ಪೂಜೆ, ಆರಾಧನೆಗಳೆಲ್ಲವೂ ಮನುಷ್ಯರಲ್ಲಿ ಇಲ್ಲಸಲ್ಲದ ಭಯವನ್ನುಂಟು ಮಾಡುವ ಅನುಕರಣಗಳೆಂದು ಈ ಬಗೆಯ ಆಚರಣೆಯನ್ನು ಕಟುವಾಗಿ ಟೀಕಿಸುತ್ತಾಳೆ. ಬದಲಿಗೆ ಪರವಸ್ತು, ಪರದೈವ, ಪರಧನ, ಪರಸ್ತ್ರೀಯರಲ್ಲಿ ಲೋಲುಪರಾಗದೆ ನಿಷ್ಠೆಯಿಂದಿರುವುದೇ ನೇಮ ಎನ್ನುತ್ತಾಳೆ. ಭಕ್ತಿಯ ವಿಚಾರವನ್ನು ಹೇಳುವ ಸಂದರ್ಭದಲ್ಲೇ "ಪರಧನ" ಎನ್ನುವಲ್ಲಿ ತನ್ನ ಪರಿಶ್ರಮದಿಂದಲೇ ಬದುಕ ನಡೆಸಬೇಕೆನ್ನುವ ಸತ್ಯಕ್ಕನ ತುಡಿತ ಅಭಿವ್ಯಕ್ತವಾಗಿದೆ.

ಅರ್ಚನೆ ಪೂಜನೆ ನೇಮವಲ್ಲ
ಮಂತ್ರ ತಂತ್ರ ನೇಮವಲ್ಲ
ಧೂಪ ದೀಪಾರತಿ ನೇಮವಲ್ಲ
ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೆ ನೇಮ
ಶಂಭುಜಕ್ಕೇಶ್ವರನಲ್ಲಿ ಇವು ಕಾಣಿರಣ್ಣ ನಿತ್ಯನೇಮ॥ [6]

**ಹಾದರದ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ**

ಗಂಗಮ್ಮ ಕಾಯಕದಲ್ಲಿ ಕೀಳು, ನಿಕೃಷ್ಟವೆಂದು ಬಗೆಯದೆ ಯಾವ ಕೆಲಸವೇ ಆಗಲಿ ನಿಷ್ಠರಾಗಿರುವುದು ಮುಖ್ಯವೆಂದಿದ್ದಾಳೆ. ಎಲ್ಲಾ ಕಾರ್ಯ ಹಾಗೂ ವೃತ್ತಿಗೆ ಅದರದೇ ಆದ ಮಹತ್ವವಿದೆ. ಆ ಕಾರ್ಯ ಕೈಗೊಳ್ಳುವುದೇ ಆ ವೃತ್ತಿ ಹಾಗೂ ಆ ವೃತ್ತಿಯಿಂದ ಗಳಿಸುವ ಸಂಪಾದನೆಗೆ ತಾನು ಸಲ್ಲಿಸಬಹುದಾದ ಗೌರವ ಎನ್ನುತ್ತಾಳೆ.

ಏಕದೇವೋಪಾಸನೆಯನ್ನು ಪ್ರತಿಪಾದಿಸುವ ಇವಳು ಕಾಗೆ- ಕೋಗಿಲೆಗಳ ಸಂಗವ ಮಾಡಿದರೆ ನರಕ ತಪ್ಪದು ಎಂದು ದುಷ್ಟ ಅನಾಚಾರಿಗಳನ್ನೂ, ಕೆಲಸಗಳ್ಳರನ್ನೂ ಖಂಡಿಸುತ್ತಾಳೆ. ಕಾಯಕವೇ ವ್ರತವಾಗಿ ಪರಿಣಮಿಸಿರುವಂತೆ ತೋರುವ ಗಂಗಮ್ಮ ರಚಿಸಿರುವ ಕಾಯಕ ಮಹತ್ವ ವನ್ನು ಹೇಳುವ ಒಂದೇ ಒಂದು ವಚನ ಇಂತಿದೆ.

ಆವ ಕಾಯಕವ ಮಾಡಿದಡೂ ಒಂದೇ ಕಾಯಕವಯ್ಯಾ
ಆವ ವ್ರತವಾದಡೂ ಒಂದು ವ್ರತವಯ್ಯಾ
ಆಯ ತಪ್ಪಿದಡೆ ಸಾವಿಲ್ಲ, ವ್ರತ ತಪ್ಪಿದುಡೆ ಕೂಡಲಿಲ್ಲ
ಕಾಕ ಪಿಕದಂತೆ ಕೂಡಲು ನಾಯಕನರಕ
ಗಂಗೇಶ್ವರ ಲಿಂಗದಲ್ಲಿ॥ [7]

**ಸೂಳೆ ಸಂಕವ್ವೆ**

ಸಂಕವ್ವೆ ತನ್ನ ವೃತ್ತಿಯನ್ನು ಒಪ್ಪಿಕೊಳ್ಳುತ್ತಲೇ ಆದಕ್ಕೆ ಗೌರವ ಸಲ್ಲಿಸುತ್ತಾಳೆ. ಆಕೆಯ ವೃತ್ತಿ ಸಮಾಜಕ್ಕೆ ಮಾರಕವಾಗಿದ್ದರೂ, ಅನಿವಾರ್ಯವಾಗಿ ಕೈಗೊಂಡಿರುವ ಕಾರಣ, ಅದರಲ್ಲೇ ಪ್ರಾಮಾಣಿಕವಾಗಿರಬೇಕಾಗಿದೆ. ಅಮಾನವೀಯ ಕಾಯಕವಾದರೂ ಅವಳಿಗೆ ತನ್ನ ಕಾಯಕದ ಬಗೆಗೆ ಗೌರವವಿತ್ತು. ಆ ಕಾರಣ ಸಂಕವ್ವೆ ತನ್ನ ವಚನದಲ್ಲಿ ನಿರ್ಲಜ್ಜೇಶ್ವರಾ ಎಂದು ಅಂಕಿತವನ್ನಿಟ್ಟು ಕೊಂಡು ಭಕ್ತಿಯಿಂದ ಕಾಯಾ ವಾಚಾ ಮನಸಾ ಮಡಿದು ದಾಸೋಹಕ್ಕೆ ಅರ್ಪಿಸಿದರೆ ಶಿವನಿಗೆ ಸಮರ್ಪಣೆಯೆಂಬ ಬಾವವುಳ್ಳವಳಾಗಿ ಕಾಣಬರುತ್ತಾಳೆ.

ಇದೇ ಸಂದರ್ಭದಲ್ಲಿ ಶಿವನರೂಪಕ್ಕೂ, ಸಂಕವ್ವೆಯ ಕಾಯಕಕ್ಕೂ ಅವಳ ಅಂಕಿತಕ್ಕೂ ಇರುವ ಸಾಮ್ಯತೆಯನ್ನು ಗುರುತಿಸಬಹುದು.

ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೇ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ॥ [8]

ವಚನಕಾರರಿಗೆ ದಾಸೋಹ ವೆಂಬುದು ಅಹಂಕಾರವಳಿದು ತನ್ನ ತನು-ಮನ-ಧನಗ ಳನ್ನು ಗುರುಲಿಂಗ ಜಂಗಮಗಳಿಗೆ ಸಮರ್ಪಿಸಲು ಮಾಡುವ ಸೇವೆಯೇ ಆಗಿದೆ.

ಆ ಕಾರಣ ಬಸವಾದಿ ಶರಣರೂ ತಮ್ಮಲ್ಲಿ ವೃತ್ತಿಯಿಂದ ಕೀಳರಿಮೆಯನ್ನಿರಿಸಿಕೊಂಡಿದ್ದ ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸಿ ಅವರು ವೇದಿಕೆಯ ಮುಂಚೂಣಿಗೆ ಬಂದು ನಿಲ್ಲುವಂತೆ ಆತ್ಮಸ್ಥೈರ್ಯವನ್ನು ತುಂಬಿದರು. ಹೀಗೆ ಕಾಯಕವು ಕೀಳರಿಮೆಯಾಗಿ ಪರಿಣಮಿಸದೆ, ಅಭಿಮಾನದ ಸಂಕೇತವಾಗಿ ಬೆಳೆಯಿತು.

## ಅಕ್ಕಮ್ಮ

ಅಕ್ಕಮ್ಮ ಪ್ರತಿಯೊಬ್ಬರೂ ತಮ್ಮ ನಿತ್ಯದ ಕಾರ್ಯಗಳನ್ನು ಸಂತೋಷದಿಂದ ಮಾಡಿದ ನಂತರ ಪುನಃ ಗುರು-ಲಿಂಗ, ಜಂಗಮ ಸೇವೆಯ ಮಾಡಲು ಹಿಂತಿರುಗಬೇಕು. ಶಿವಭಕ್ತರ ಒಳ್ಳೆಯ ಮಾತುಗಳನ್ನು ಕೇಳುತ್ತಾ, ಶರಣರ ಸಂಗದಲ್ಲಿರಬೇಕು. ಹೀಗೆ ಶರಣರ ಸಂಗದಲ್ಲಿರುವವ ನಿಗೆ ಆಚಾರ, ಜ್ಞಾನ, ಸದ್ಬುದ್ಧಿ ಲಭಿಸಿ, ಸರ್ವಚೇತನನಾಗುವನು ಎಂದಿದ್ದಾಳೆ. ಕಾಯಕದಿಂದ ಸಂತೋಷ ಹೊಂದಿ ಮರಳಿ ಭಕ್ತಿಗೆ ಹಿಂತಿರುಗುದನ್ನು ಈ ಕೆಳಗಿನ ವಚನದಲ್ಲಿ ಕಾಣಬಹುದು.

ಕಾಯಕ ಮತ್ತು ಭಕ್ತಿಗಿನ ಅಂತಃ ಸಂಬಂಧವನ್ನು ಈ ಕೆಳಗಿನ ವಚನ ನಿರ್ವಚಿಸುವುದ ರೊಂದಿಗೆ ಸೋಮಾರಿತನವನ್ನು ದೂರಮಾಡಿ ಕೆಲಸಗಳ್ಳತನವನ್ನು ತೊರೆಯಬೇಕೆಂಬ ಅಕ್ಕಮ್ಮನ ಮಹದಾಸೆಯನ್ನು ಸೂಕ್ಷ್ಮವಾಗಿ ಸೂಚಿಸುತ್ತದೆ.

ತಾ ಮಾಡುವ ಕೃಷಿಯ ಮಾಡುವನ್ನ ಬರಮಾಡಿ
ಕೃಷಿ ತೀರಿದ ಮತ್ತೆ ಗುರುದರ್ಶನ ಲಿಂಗಪೂಜೆ ಜಂಗಮ ಸೇವೆ
ಶಿವಭಕ್ತರ ಸುಖ ಸಂಭಾಷಣೆ, ಶರಣರ ಸಂಗ
ಈ ನೇಮವನರಿತಿಪ್ಪುದು ಸದ್ಭಕ್ತನ ಸದಾತ್ಮನ ಯುಕ್ತಿ
ಆಚಾರವೆ ಪ್ರಾಣವಾಗಿಪ್ಪ, ರಾಮೇಶ್ವರಲಿಂಗಕ್ಕೆ,
ಆತನೆ ಚೇತನ ಭಾವ॥[9]

## ಅಮುಗೆ ರಾಯಮ್ಮ

ರಾಯಮ್ಮನೆಂದರೆ ನಿಷ್ಠುರತೆ ಎನ್ನಬಹುದು. ಇವಳು ಜ್ಞಾನಿಗಳೆಂದು ಕರ್ತವ್ಯ ಪ್ರಜ್ಞೆಯಿ ಲ್ಲದೆ ತಿರುಗುವ ವೇಷಧಾರಿಗಳನ್ನೂ ಕಟುವಾಗಿ ಟೀಕಿಸುತ್ತಾಳೆ. ಮನುಷ್ಯನಾದ ಮೇಲೆ ಪಶುಬು ದ್ಧಿಯ ತೊರೆಯಬೇಕು, ಅದ ಬಿಟ್ಟು ಸಿಕ್ಕಿದ್ದನ್ನೆಲ್ಲಾ ಕಬಳಿಸಿದರ, ಅದು ಆ ವ್ಯಕ್ತಿಯ ದೌರ್ಬಲ್ಯ ವನ್ನು ಸೂಚಿಸುತ್ತದೆಂದಿದ್ದಾಳೆ. ತನ್ನ ಪಾಲಿನ ಕರ್ತವ್ಯನಿರ್ವಹಣೆಯಲ್ಲಿ ವೇಷಮರೆಸಿ ತನ್ನದಲ್ಲದ ವ್ಯಕ್ತಿತ್ವದ ಮುಖವಾಡ ಧರಿಸುವಾತನು ಕಳ್ಳನಿಗೆ ಸಮ ಎಂದು ಒರಟಾಗಿಯೇ ಹೇಳಿದ್ದಾಳೆ.

ಹೊಟ್ಟೆಯ ಹೊರೆವ ಪಶು ಕಟ್ಟಿಕೊಲ್ಲುವುದ ಬಲ್ಲುದೆ?
ಕಷ್ಟಜೀವಗಳ್ಳರು ಕರ್ತುವಿನ ವೇಷತೊಟ್ಟು
ಕತ್ತೆಯಂತೆ ತಿರುಗುವ ಕಳ್ಳರನ್ನೊಲ್ಲ ಅಮುಗೇಶ್ವರ ಲಿಂಗವು॥ [10]

ವಚನಕಾರ್ತಿಯರು ಕಾಯಕದ ಬಗೆಗಾಡಿರುವ ಮಾತುಗಳಲ್ಲಿ ಹೊಯ್ದಾಟವಿರದೆ ನಿಶ್ಚಲ ನಿಲುವುಳ್ಳವರಾಗಿದ್ದಾರೆ. ಅಂದರೆ ಪ್ರತಿದಿನವು ದುಡಿಮೆಗೆ ಶ್ರಮವ್ಯಯವಾಗಬೇಕು. ಆಯಾ ದಿನ ಅಂದಿನ ಸಂಪಾದನೆಯಿಂದಲೇ ಸಾಗ ಬೇಕು. ನಿತ್ಯ ಕಾಯಕ ತತ್ವ ಶರಣರ ಧರ್ಮವಾಗಿ, ಸಂಪತ್ತಿನ ಸಂಗ್ರಹಣೆಗೆ ಅವಕಾಶವಿರಬಾರದು. ವೃತ್ತಿ ಕೈಗೊಳ್ಳುವಲ್ಲಿ ಪರಿಶುದ್ಧ ಮನೋಭಾವವಿದ್ದು ಮೇಲು-ಕೀಳೆಂಬ ಭಾವನೆಯಿರಬಾರದೆಂದು ಸಾರಿ ಸಮಾಜದಲ್ಲಿ ಅನರ್ಥಸಂಭವಿಸುವುದನ್ನು ತಡೆಹಿಡಿದರು.

**ಸ್ತ್ರೀಯರು ಕುಟುಂಬದ ಚೌಕಟ್ಟಿನಿಂದ ಕಾಯಕದೆಡೆಗೆ ಸಾಗಿದುದು :-**

ಈ ಹಿಂದೆ ಹೆಣ್ಣು ಶೂದ್ರರಿಗೆ ಸಮಾನಳೆಂಬ ಭಾವನೆಯಿದ್ದು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ಅವಳ ಪ್ರಕೃತಿ ಸಹಜವಾದ ದೈಹಿಕ ಪ್ರಕ್ರಿಯೆಗಳನ್ನು ಸೂತಕವೆಂದು ಹೇಳುತ್ತಾ ಮಾನಸಿಕವಾಗಿ ಹಿಂಸಿಸುತ್ತಿದ್ದರು. ಮನೆಯ ಜವಾಬ್ದಾರಿ ಮಕ್ಕಳ ಪೋಷಣೆಯಷ್ಟೇ ಅವಳ ಕರ್ತವ್ಯವಾಗಿತ್ತು. ಆ ಕಾರ್ಯಗಳಲ್ಲೇ ಸಂತೃಪ್ತಿ ಹೊಂದುವ ಅನಿವಾರ್ಯತೆ ಅವಳದಾಗಿತ್ತು. ಅಭಿವ್ಯಕ್ತಿ ಸ್ವಾತಂತ್ರ್ಯವಿಲ್ಲದೆ, ಅಗೌರವ, ಅವಹೇಳನಗಳಿಗೆ ಗುರಿಯಾಗಿದ್ದ ಆಕೆ ತನಗಾದ ಅನ್ಯಾಯವನ್ನು ಪ್ರಶ್ನಿಸಲಾಗದೆ ಉಸಿರುಗಟ್ಟುವ ವಾತಾವರಣದಲ್ಲಿ ಬದುಕುತ್ತಿದ್ದಳು.

ವಚನಕಾರರು ಈ ಬಗೆಯ ವಾತಾವರಣದಿಂದ ಮುಕ್ತಿ ದೊರಕಿಸಿಕೊಟ್ಟು, ಹೆಣ್ಣು -ಗಂಡು ಇಬ್ಬರೂ ಸಮಾನರೆಂದು, ಹೆಣ್ಣಿಗೇಕೆ ಈ ಬಗೆಯ ಕಟ್ಟುಪಾಡುಗಳ ಶೃಂಖಲೆಗಳೆಂದು ಪ್ರಶ್ನಿಸಿ, ಪರಂಪರೆಯಿಂದಲೂ ಹಿಂಸೆಗೊಳಗಾಗಿದ್ದ ಸ್ತ್ರೀಯರಿಗೆ ವಿಮೋಚನೆ ನೀಡಿದರು.

ವೃತ್ತಿ ಕೈಗೊಳ್ಳುವಲ್ಲಿಯೂ ಭೇದವ ಮಾಡದೆ ಸ್ವತಂತ್ರ್ಯವಾಗಿ ತಾನು ಇಚ್ಛಿಸಿದ ವೃತ್ತಿ ಕೈಗೊಳ್ಳಲು ಅನುವು ಮಾಡಿಕೊಟ್ಟರು. ಅಭಿಮಾನದಿಂದ ವೃತ್ತಿಯ ಕೈಗೊಂಡು ನಿಷ್ಠಾವಂತಿಕೆಯ ಆದರ್ಶ ಬದುಕನ್ನು ಬಾಳಿದರು.

ಕಾಯಕ ಮಂತ್ರದಿಂದಲೇ ತಮ್ಮ ಕುಲಮೂಲ ಸಂಸ್ಕೃತಿಯ ಹಿನ್ನಲೆಯಲ್ಲಿಯೇ, ತಮ್ಮ ಅಸ್ತಿತ್ವನ್ನು ಕಂಡು ಕೊಂಡ ವಚನಕಾರ್ತಿಯರು ತಮ್ಮ ಹೆಸರಿನೊಂದಿಗೆ ತಮ್ಮ ವೃತ್ತಿ ಸೂಚಕವನ್ನು ಸೇರಿಸಿಕೊಂಡು ವೃತ್ತಿ ಗೌರವವನ್ನು ಸಲ್ಲಿಸಿದ್ದಾರೆ. ಉದಾಹರಣೆಗೆ :- ಆಯ್ದಕ್ಕಿಲಕ್ಕಮ್ಮ, ಸೂಳೆ ಸಂಕವ್ವೆ, ಕನ್ನಡಿ ಕಾಯಕದ ರೇಮಮ್ಮ, ಕೊಟ್ಟಣದ ಸೋಮಮ್ಮ, ಕದಿರರೆಮ್ಮವ್ವೆ ಇತ್ಯಾದಿ.

ಕಾಯಕದ ಕುಲಮೂಲ ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ತಮ್ಮ ಅಸ್ತಿತ್ವವನ್ನು ಕಂಡು ಕೊಂಡರು. ತಮ್ಮ ಕುಲಕಸುಬುಗಳನ್ನೇ ಯಾವುದೇ ಕೀಳರಿಮೆಯಿಲ್ಲದೆ ಮುಂದುವರೆಸಿಕೊಂಡು ಹೋದರು.

ಹೀಗೆ ವಚನ ಚಳುವಳಿಯಿಂದಾಗಿ ಮಹಿಳೆ ಅಭಿವ್ಯಕ್ತಿ ಸ್ವಾತಂತ್ರ್ಯದ ಜೊತೆಗೆ ವೃತ್ತಿ ಸ್ವಾತಂತ್ರ್ಯವನ್ನು ಪಡೆದಳು.

ಸ್ವಾತಂತ್ರ್ಯವನ್ನು ಪಡೆದುದರ ಕುರುಹಾಗಿ ಬಹು ಹಿಂದಿನಿಂದ ಜೀವನದುದ್ದಕ್ಕೂ ಕಡೆಗಣಿತವಾಗಿದ್ದ ವೃತ್ತಿಗೂ ಹಾಗೂ ಜನಾಂಗಕ್ಕೂ ಗೌರವ ತಂದು ಕೊಟ್ಟರು. ಆ ಮೂಲಕ ಕೈಗೊಂಡ ಕೆಲಸದ ಬಗೆಗೆ ಅವರಲ್ಲಿ ಅವಮಾನವೆಂಬುದು ಸುಳಿಯದಾಯಿತು.

ಇಂದಿನ ಆಧುನಿಕ ಸಮಾಜವಲ್ಲೂ ವೃತ್ತಿಯಲ್ಲಿ ಶ್ರೇಷ್ಠ-ಕನಿಷ್ಠತೆಯನ್ನು ಎಣಿಸುವಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಕಾಯಕತತ್ವ ಮಾದರಿಯಾಗಿದೆ. ಅಂದು ಸ್ತ್ರೀಯರಿಗೆ ದೊರೆತ ಉದ್ಯೋಗಾವಕಾಶ ಇಂದಿನ ಆಧುನಿಕ ಮಹಿಳೆಯರ ಆಲೋಚನಾ ಕ್ರಮವನ್ನು ನೆನಪಿಸುತ್ತದೆ. ಅಂದರೆ ಗೃಹ ಕೆಲಸದೊಂದಿಗೆ ಹೊರಗೆ ದುಡಿದು ಆರ್ಥಿಕವಾಗಿ ಸಬಲಳಾದ ಸ್ತ್ರೀ ಹೊಸ ಬಗೆಯ ಗೌರವ ಸ್ಥಾನಮಾನವನ್ನು ಪಡೆಯುತ್ತಾಳೆಂಬ ಸತ್ಯವನ್ನು ವಚನಕಾರರು ಆ ಕಾಲಕ್ಕಾಗಲೇ ಮನಗಂಡು ಪ್ರೋತ್ಸಾಹ ನೀಡಿದ್ದು ಇಂದಿಗೂ ಅನುಕರಣೀಯವಾಗಿದೆ.

ವಚನ ಚಳುವಳಿಯಲ್ಲಿ ಅಂದು ವಿದ್ಯೆ, ಶ್ರೀಮಂತಿಕೆ, ರಾಜತ್ವ, ವರ್ಗ ಇವುಗಳಾವುವು ಕಾರ್ಯ ಕೈಗೊಳ್ಳುವಲ್ಲಿ ಅಡೆತಡೆಯನ್ನಾಗಲೀ, ಮುಖ್ಯವಾದ ವಿಚಾರಗಳೆಂದಾಲೀ ಪರಿಗಣಿತವಾಗಿಲ್ಲವೆನ್ನುವುದು ಆಶ್ಚರ್ಯವನ್ನು ಉಂಟುಮಾಡುತ್ತದೆ.

## ಅಡಿಟಿಪ್ಪಣಿಗಳು

1. The Worlds greatest quotations
Compliled by Tryon Edwards. D. D. – P 715
2. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ – ಪುಟ 232, ವಚನ –1
3. ಬಸವಣ್ಣನವರ ವಚನಗಳು : ಡಾ|| ಆರ್.ಸಿ. ಹಿರೇಮಠ – ಪುಟ 171, ವಚನ –435
4. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ – ಪುಟ 226, ವಚನ –6
5. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣ ರಾಜೂರ ಪುಟ 323, ವಚನ –2
6. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣರಾಜೂರ ಪುಟ 364, ವಚನ –2
7. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣರಾಜೂರ ಪುಟ 415, ವಚನ –1
8. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣರಾಜೂರ ಪುಟ 374, ವಚನ –1
9. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣರಾಜೂರ ಪುಟ 154, ವಚನ –63
10. ಶಿವಶರಣೆಯರ ವಚನ ಸಂಪುಟ : ಡಾ|| ವೀರಣ್ಣರಾಜೂರ ಪುಟ 217, ವಚನ –115

# ಅಧ್ಯಾಯ – 3

## ವಚನಕಾರ್ತಿಯರಲ್ಲಿ ಸಾಮಾಜಿಕ ಪ್ರತಿಭಟನೆಯ ಸ್ವರೂಪ

ಮಾನವ ಸಮಾಜಜೀವಿಯಾಗಿದ್ದು, ತನ್ನ ವೈಯಕ್ತಿಕ ಆಸೆ-ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಇತರರನ್ನು ಅವಲಂಬಿಸಿದ್ದಾನೆ. ಆ ಮೂಲಕ ತನ್ನ ಸುತ್ತಮುತ್ತಲ ಸಮಾಜದ ಅವಿಭಾಜ್ಯ ಅಂಗವಾಗಿ ಒಂದು ವಿಶಿಷ್ಟ ಸ್ಥಾನವನ್ನು ಹೊಂದಿದ್ದಾನೆ. ಇಂತಹ ಸಮಾಜದ ಸಹಾಯವಿಲ್ಲದೆ ಅವನ ಪ್ರಗತಿ ಸಾಧ್ಯವಿಲ್ಲ. ಈ ಸಮಾಜದ ವ್ಯವಸ್ಥೆಯು ವ್ಯಕ್ತಿಯ ಪ್ರಾಪಂಚಿಕ ಸುಖ-ಶಾಂತಿಗಳ ಉದ್ದೇಶವನ್ನಿಟ್ಟುಕೊಂಡಾಗ ರಾಜ್ಯ ರಾಷ್ಟ್ರಗಳ ನಿಯಂತ್ರಣಕ್ಕೆ ಪರಸ್ಪರ ಸಹಕಾರ ಹಾಗೂ ಸಹಾಯಗಳ ಅಗತ್ಯವಿದೆ. ಪ್ರತಿಯೊಬ್ಬ ವ್ಯಕ್ತಿಯೂ ಸತ್ಯ, ಅಹಿಂಸೆ, ನೀತಿಗಳಿಗೆ ಬದ್ಧನಾಗಿರುವಂತೆ ನೋಡಿಕೊಂಡು ಜಗತ್ತಿನ ಹಿತವನ್ನು ಕಾಯ್ದುಕೊಳ್ಳಬೇಕಾಗುತ್ತದೆ.

ಹಲವಾರು ಕುಟುಂಬಗಳು ಒಂದೆಡೆ ನೆಲೆಸಿ ಜೀವನ ನಡೆಸುವುದು 'ಸಮಾಜ'ವಾಗಿ, ಈ ಸಮಾಜದ ಅಗತ್ಯಗಳ ಪೂರೈಕೆಯಿಂದ ಶಾಂತಿ ಸುಭಿಕ್ಷೆ ನೆಲೆಸುತ್ತದೆ. ಹೀಗೆ ಅಗತ್ಯ ಪೂರೈಸಲು ಪರಸ್ಪರ ಸಹಕಾರದ ಅವಶ್ಯಕತೆಯಿರುತ್ತದೆ. ಅಗತ್ಯ ಪೂರೈಕೆಯಿಂದ ಸಮಾಜದ ವಿಕಾಸವಾಗುತ್ತದೆ. ಸಮಾಜದ ವಿಕಸನ ತತ್ವಗಳನ್ನು ಧಿಕ್ಕರಿಸುವ ಜನರನ್ನು ಯಾವ ಸಮಾಜವು ಉಳಿಸಿಕೊಳ್ಳಲಾರದು. ಏಕೆಂದರೆ ಸಮಾಜದ ಹಿತವೇ ಬದುಕಿನಲ್ಲಿ ಬಹು ಮುಖ್ಯವಾದುದಾಗಿದೆ.

ಈ ನಿಟ್ಟಿನಲ್ಲಿ ಸಮಾಜದ ಹಿತಕ್ಕೆ ಪರಿಪೂರ್ಣವಾದ ಸಂಸ್ಕೃತಿಯೊಂದು ಕಾರಣವಾಗಿರುತ್ತದೆ. 'ಸಂಸ್ಕೃತಿ'ಯನ್ನು ಮಾನಸಿಕ ಶಿಕ್ಷಣ ಅಥವಾ ಮಾನಸಿಕ ಪರಿಪಕ್ವತೆ ಹೊಂದಿದ ಜನಸಮೂಹದ ವರ್ತನೆ ಎಂದು ಅರ್ಥೈಸಬಹುದು. ಅಂದರೆ ವ್ಯಕ್ತಿತ್ವ ಶುದ್ಧತೆಯಿಂದ ಸಮಾಜವನ್ನು ರೂಪಿಸುವ ಅಗತ್ಯಕ್ಕೆ ಹೆಚ್ಚು ಒತ್ತುಕೊಡಬೇಕಾಗುತ್ತದೆ.

### ವಚನಕಾರರು ಸಮಾಜವನ್ನು ಗ್ರಹಿಸಿದ ನೆಲೆ

ಹನ್ನೆರಡನೆಯ ಶತಮಾನದ ಹೊತ್ತಿಗೆ ಜೈನ ಹಾಗೂ ವೈದಿಕ ಧರ್ಮಗಳು ತಮ್ಮ ಸತ್ವವನ್ನು ಕಳೆದುಕೊಂಡಿದ್ದವು. ಸಮಾಜವು ಮತಾಂದತೆ, ದ್ವೇಷ, ವೈಷಮ್ಯ, ಮೂಢನಂಬಿಕೆ, ಅಂಧಶ್ರದ್ಧೆಗಳ ಮಡುವಾಗಿತ್ತು. ಉದ್ಯೋಗಗಳ ಮೂಲಕ ಜನಗಲ್ಲಿ ಮೇಲು-ಕೀಳೆಂಬ ಭಾವನೆ ಹುಟ್ಟಿ ಅಸ್ಪೃಶ್ಯತೆ ತಲೆದೋರಿತ್ತು. ಆ ಸಂದಿಗ್ಧ ಸಂದರ್ಭದಲ್ಲಿ ವಚನಕಾರರು ಸರ್ವಸಮತೆಯ ಉದಾರತತ್ವಕ್ಕೆ ಪ್ರಾಶಸ್ತ್ಯವನ್ನು ನೀಡಿ ಹೊಸ ಸಮಾಜವೊಂದರ ಸೃಷ್ಟಿಯ ಭಾರವನ್ನು ಹೊತ್ತರು.

ಈ ನಿಟ್ಟಿನಲ್ಲಿ ಸಮಾಜದ ಹಿತವನ್ನು ಸಾಧಿಸಿದರೆ ಆತ್ಮಹಿತವು ತನ್ನಷ್ಟಕ್ಕೆ ತಾನೇ ಆಗುತ್ತದೆ ಎಂದು ಶರಣರು ಸಮಾಜದ ಸುಧಾರಣೆಯ ಮಾರ್ಗಗಳನ್ನು ಹಾಕಿಕೊಂಡರು. ಸಾಧನೆಗೆ ಜಾತಿ, ಮತ, ಕಾಯಕಗಳಾವುವೂ ಅಡ್ಡಿಯಾಗಲಾರವು ಎಂದು ಮಾನವೀಯ ಅನುಕಂಪದ ಮೂಲಕ ಸಾಮಾಜಿಕ ಜಾಗೃತಿ ಮೂಡಿಸಲು ಪಣತೊಟ್ಟರು. ಈ ಬಗೆಯ ವೈಚಾರಿಕ ಹಾಗೂ ವಿಚಾರಪೂರ್ಣದೃಷ್ಟಿ ಕಾಲಗಳನ್ನು ಮೀರಿ ಬೆಳೆಯುವ ಯುಗ ಪ್ರವರ್ತಕ ಶಕ್ತಿಯಾಗಿ ಪರಿಣಮಿಸಿತು.

ಸಮಾಜದ ಸ್ವಾಸ್ಥ್ಯವು ಮೂಲಭೂತವಾಗಿ ವ್ಯಕ್ತಿಯ ನೀತಿಮತ್ತೆಯನ್ನು ಅವಲಂಬಿಸಿರುತ್ತದೆ. ವ್ಯಕ್ತಿ ನಿಷ್ಠತೆ ಇಲ್ಲವಾದರೆ ಶ್ರೇಣೀಕರಣ ಉಂಟಾಗುತ್ತದೆಂದು ಈ ಬಗೆಯ ಮನೋವಿಕಾರತೆಯನ್ನು ಕಳೆಯಲು ನೀತಿಗೆ ಮಹತ್ವವನ್ನು ಕೊಟ್ಟಿರುವುದನ್ನು ಬಸವಣ್ಣನವರ ಈ ಕೆಳಗಿನ ವಚನದಲ್ಲಿ ಕಾಣಬಹುದು

"ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ".[1]

## ಸಮಾಜ ಹಾಗೂ ವಚನಕಾರ್ತಿಯರು

ವಚನ ಚಳುವಳಿಯ ಪ್ರೇರಣೆಯಿಂದ ಸ್ತ್ರೀಯರಲ್ಲೂ ಆತ್ಮವಿಶ್ವಾಸ ಮೂಡಿ. ಈವರೆಗೆ ಮೌನವಾಗಿದ್ದ ಮಹಿಳೆ ವಿಶಿಷ್ಟವಾಗಿ ದನಿಯೆತ್ತಿದಳು. ಈವರೆಗೆ ತನ್ನಮನದಾಳದಲ್ಲಿ ಉಳಿದುಹೋಗಿದ್ದ ಪ್ರಶ್ನೆಗಳು, ದ್ವಂದ್ವಗಳೆಲ್ಲವನ್ನು ಅನಾವರಣಗೊಳಿಸಿ. ಪ್ರಾಮಾಣಿಕವಾಗಿ ಉತ್ತರಕಂಡುಕೊಳ್ಳಲು ಪ್ರಯತ್ನಿಸಿದಳು. ಎತ್ತನೋಡಿದರೂ ಹಿಂಸೆಯ ಕೂಪವಾಗಿದ್ದ ನಡವಳಿಕೆಯನ್ನು ವಿಮರ್ಶೆಗೆ ಒಳಪಡಿಸಿ. ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವಂತಾದಳು. ಆ ಮೂಲಕ ತನ್ನ ವ್ಯಕ್ತಿತ್ವಕ್ಕೊಂದು ವಿಶಿಷ್ಟತೆಯನ್ನು ಪಡೆದಳು.

ಆ ಕಾಲಕ್ಕೆ ಮಹಿಳೆಯ ಸ್ಥಾನಮಾನದಲ್ಲಾದ ಈ ಬಗೆಯ ಪರಿವರ್ತನೆ ಆಶ್ಚರ್ಯದಾಯಕವಾದವು. ಸಾಂಪ್ರದಾಯಿಕ ಸಂಕೋಲೆಗಳನ್ನು ಮುರಿದೊಗೆದು ಸ್ತ್ರೀಯರು ಮಾತನಾಡಿದ್ದೆ ಒಂದು ಬಗೆಯ ಪ್ರತಿಭಟನೆ ಎನ್ನಬಹುದು. ಶಿವಶರಣರ ಬೆಂಬಲ ಹಾಗೂ ಪ್ರೋತ್ಸಾಹದಿಂದ ತಮಗಾಗುತ್ತಿದ್ದ ಅನ್ಯಾಯಗಳನ್ನು ಅರ್ಥೈಸುವ ಶಕ್ತಿ ಅವಳಲ್ಲಿ ಒಡಮೂಡಿತು.ಪಾರಂಪರಿಕ ಸಮಾಜವ್ಯವಸ್ಥೆಯನ್ನು ಪ್ರಶ್ನಿಸುವ ಸಂದರ್ಭ ಅಥವಾ ಸ್ಥಿತಿ ತಮಗೊದಗಿ ಬರುವುದೆಂಬ ನಿರೀಕ್ಷೆಯು ಇಲ್ಲದ ಮಹಿಳೆಯರಿಗೆ ಈ ಬಗೆಯ ಅವಕಾಶ-ಪ್ರೇರಣೆ ನೀಡುವುದು ಚಳುವಳಿಯ ಮುಖ್ಯ ಉದ್ದೇಶವಾಗಿರುವಂತೆ ತೋರುತ್ತದೆ.

ವಚನಕಾರ್ತಿಯರಿಗೂ ಸಮಾಜದ ಸುಖ ಮುಖ್ಯವಾಗಿ ಸಮಾಜದಲ್ಲಿ ಅಶಾಂತಿ ಅತೃಪ್ತಿ ತಾಂಡವಾಡಿದರೆ ನೆಮ್ಮದಿ ಗಗನ ಕುಸುಮವೆಂದು ಅರಿತಿದ್ದರು. ಆ ಕಾರಣ ಮನಸ್ಸಿನ ದುಃಖ, ಅನಿಸಿಕೆ, ವಿಚಾರಗಳನ್ನು ಮನಬಿಚ್ಚಿ ಮಾತನಾಡಿ ವಿಶ್ಲೇಷಿಸಿದುದರ ಜೊತೆಗೆ ಕಾಯಕದಲ್ಲಿಯೂ ಸಹಭಾಗಿನಿಯಾದಳು. ತಮ್ಮ ಜೀವನಾನುಭವದ ಸಾರವನ್ನು ಸುಂದರವಾದ ವಚನಗಳ ಮೂಲಕ ಹೊರಹೊಮ್ಮಿಸಿದರು. ವಚನಕಾರ್ತಿಯರು ತಮ್ಮ ಅನುಭವವನ್ನು ಅಭಿವ್ಯಕ್ತಪಡಿಸುವಲ್ಲಿ ಅದ್ಬುತ ಕವಿತಾಶಕ್ತಿಯಿಂದ ಅನೈತಿಕ, ಅನಾಚಾರ, ಅಸಮಾನತೆ, ಸಂಪ್ರದಾಯಗಳ ಕಟ್ಟುಪಾಡುಗಳ ಬಗೆಗೆ ಕಿಡಿಕಾರಿದರು. ಹೀಗೆ ಬಿಗಿ ಸಂಕೋಲೆಯಿಂದ ಬಂದಂತಹ ವಚನಕಾರ್ತಿಯರಲ್ಲಿ ಸಮಾಜದ ಆಗು-ಹೊಗುಗಳ ಬಗೆಗಿನ ವಚನಗಳು ವಿಪುಲವಾಗಿವೆ.

## ವಚನಕಾರ್ತಿಯರು ಸಮಾಜದೊಂದಿಗೆ ನಡೆಸಿದ ಹೋರಾಟದ ಸ್ವರೂಪ:-

## ಅಕ್ಕಮಹಾದೇವಿ

ಅಂತರ್ಮುಖಿಯಾದ ಮಹಾದೇವಿಯಕ್ಕನ ವಚನಗಳಲ್ಲಿ ಲೌಕಿಕ ಬದುಕಿನ ಬಗೆಗೆ ಚಿಂತನೆ ಕಾಣುವುದು ವಿರಳವೆಂಬ ಮಾತಿದೆ. ಆದರೆ ಅಕ್ಕಮಹಾದೇವಿ ಲೋಕದ ಅಹಿತಕರ ಘಟನೆಗಳ ವಿರುದ್ಧ ಅಳುಕಿಲ್ಲದೆ ನಿರ್ಭೀತಿಯಿಂದ ಮಾತನಾಡುತ್ತಾಳೆ. ಹೆಣ್ಣಿಗಿದ್ದ ನಿಯಮಗಳನ್ನು ಮೀರುವ ಅವಳಲ್ಲಿನ ದಿಟ್ಟತನ ಇಂದಿಗೂ ಅನುಕರಣೀಯವಾಗಿದೆ.

ಸಾಧನೆಗೆ ಮನೋಸ್ಥೈರ್ಯ ಬಹಳ ಮುಖ್ಯವೆಂಬುದು ಅಕ್ಕನ ವಾದ. ಮನುಷ್ಯನಲ್ಲಿನ ಮನೋವಿಕಾರಗಳೇ ಸಕಲ ಅನಾಹುತಕ್ಕೆ ಕಾರಣವೆಂದು, ಆರೋಗ್ಯಕರ ವಾತಾವರಣದ ಅವಶ್ಯಕತೆಯನ್ನು ಕುರಿತಾಗಿ ಹೇಳುತ್ತಾಳೆ. ಇದೇ ಸಂದರ್ಭದಲ್ಲಿ ಲೋಕದ ಜನರ ಮನೋವಿಕಾರತೆಯ ಕುರಿತು ನಿರ್ಲಿಪ್ತರಾಗಲು ಆದೇಶಿಸುತ್ತಾಳೆ.

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಂಗಳಿಗಂಜಿದಡೆಂತಯ್ಯ?
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದೊಡೆಂತಯ್ಯ?
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ-ನಿಂದೆಗಳು ಬಂದರೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.[2]

ಲೋಕದಲ್ಲಿ ಜನರು ಇತರರ ಕಂಡು ಅನ್ನುವುದು, ಆಡುವುದು ಸಹಜ, ಅವರ ಮಾತುಗಳನ್ನು ಪರಿಗಣಿಸಿ ಬದುಕಲೆಳೆಸಿದರೆ ಬಾಳು ನರಕವಾಗುತ್ತದೆ. ಎಲ್ಲ ಬಗೆಯ ಹಂಗನ್ನು, ಅಂಜಿಕೆಗಳನ್ನು ತೊರೆದಾಗ ಮಾತ್ರ ಲೋಕದಲ್ಲಿ ನೆಮ್ಮದಿಯಿಂದ ಬದುಕಬಹುದು. ಆಕಾರಣ ಕೋಪವನ್ನು ತಾಳದೆ ಸಮಾಧಾನಿಯಾಗಿದ್ದುಕೊಂಡು ಸಮಾಜವನ್ನು ಹೆದರಿಸಬೇಕೆಂಬ ಕ್ರಮವನ್ನು ಅಕ್ಕ ನಿರೂಪಿಸಿದ್ದಾಳೆ. 'ಸಮಾಧಾನಿ'ಯಾಗಿರುವುದು ಎಂದರೆ ಲೋಕದ ಅಪವಾದಗಳನ್ನೆಲ್ಲ ಸಹಿಸಿಕೊಳ್ಳುವುದು ಎಂದಾಗದೇ, ಈ ಬಗೆಯ ವಿಚಾರಗಳನ್ನು ಗಮನಿಸದೇ ತಿರಸ್ಕಾರ ಮಾಡುವುದಾಗಿದೆ. ಭಕ್ತಿಯ ಹೆಸರಿನಲ್ಲಿ ಮೌಢ್ಯದಿಂದ ಆಚರಿಸುವ ಪ್ರಾಣಿಹಿಂಸೆಯನ್ನು ಒಪ್ಪದೆ, ಬದುಕಿನಲ್ಲಿನ ನೀತಿವತ್ತಾದ ವಿಧಿವಿಧಾನಗಳ ಆಚರಣೆಯಿಂದ ಭಕ್ತಿಯನ್ನು ಆಚರಿಸಬೇಕೆನ್ನುತ್ತಾಳೆ. ಅಕ್ಕ ಮಾನವೀಯತೆಯ ಸಾರವನ್ನು ಎತ್ತಿಹಿಡಿದು ಸಂಪ್ರದಾಯವನ್ನು ಸಡಿಲಗೊಳಸಲು ಪ್ರಯತ್ನಿಸಿರುವ ಪರಿಯನ್ನು ಈ ಕೆಳಗಿನ ವಚನದಲ್ಲಿ ಗುರುತಿಸಬಹುದು.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ
ಹಲವು ಪ್ರಾಣಿಗಳ ಕೊಂದು ನಲಿದಾಡುವ!
ತನ್ನ ಮನೆಯಲೊಂದು ಶಿಶು ಸತ್ತರೆ
ಅದಕೆ ಮರುಗುವಂತೆ ಅವಕೇಕೆ ಮರುಗನು?
"ಸ್ವಾತ್ಮಾನಮಿತರಾಂಶ್ಚೈವ
ದೃಷ್ಟಾದೃಷ್ಟಾನ ಭಿದ್ಯತೇ!
ಸರ್ವಂ ಚಿಜ್ಜ್ಯೋತಿರೇವೇತಿ
ಯಃ ಪಶ್ಯತಿ ಸ ಪಶ್ಯತಿ॥"
ಎಂದುದಾಗಿ- ಜಾಲಗಾರನ ದುಃಖ ಜಗಕೆಲ್ಲ ನೆಗೆಗೆಡೆ!
ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು
ಜೀವ-ಹಿಂಸೆಯ ಮಾಡುವ ಮಾದಗರನೇನೆಂಬೆನಯ್ಯ[3]

ಇಲ್ಲಿ ಅಹಿಂಸಾತತ್ವವೂ ಸಾಮಾಜಿಕ ಜವಾಬ್ದಾರಿಯಾಗಿ ಪರಿಣಮಿಸಿರುವುದನ್ನು ಗುರುತಿಸಬಹುದು

ಮಾಂಸಾಹಾರ ಸೇವನೆ ಅಪವಿತ್ರವೆಂದು, ಪ್ರಾಣಿಗಳನ್ನು ಹಿಂಸಿಸುವುದು ಅಮಾನವೀಯವಾದುದೆಂಬ ಭಾವನೆಯನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿ ಕಾಣಬಹುದು. ಅಹಿಂಸೆ ಪರಮತತ್ವವೆಂದು ಸಾತ್ವಿಕ ಭಾವನೆಯನ್ನು ಬೆಳೆಸಿಕೊಳ್ಳಬೇಕಾದುದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯವೆಂದು ಭಕ್ತನಾದವನು ಜೀವಹಿಂಸೆಯ ಮಾಡಿದನಾದರೆ ಅವನು ಮಾದಿಗನಿಗೆ ಸಮಾನನೆಂದು ಬಹು ಕುಟುವಾಗಿ ನುಡಿದಿದ್ದಾಳೆ

ಬದುಕೆಂಬುದು ನಶ್ವರ, ಕ್ಷಣಿಕ, ಸಾವು-ನೋವುಗಳ ಜಾಲವೆಂದು ಲೌಕಿಕವನ್ನು ಮೀರುವುದು ಅಥವಾ ಅದರ ಬಂಧನದಲ್ಲಿ ಚಿಂತೆಗೀಡಾಗಿ ಬಾಳುವುದನ್ನು ನಿರ್ಲಕ್ಷಿಸುತ್ತಾಳೆ. ದೈನಂದಿನ ಬದುಕಿನಲ್ಲಿ ಸಮಾಜ ವ್ಯಕ್ತಿಯ ಮೇಲೆ ಹೊರಿಸುವ ಕಟ್ಟಳೆಗಳು ಅವನ ವ್ಯಕ್ತಿತ್ವವನ್ನು ಕಬಳಿಸಿ ಆತಂಕವನ್ನುಂಟುಮಾಡಬಹುದು. ಅಂತಹ ಸಂದರ್ಭದಲ್ಲಿ ದುಷ್ಟ ಶಕ್ತಿಗಳನ್ನು ನಿವಾರಣೆ ಮಾಡಿಕೊಳ್ಳಲಿರುವ ಮಾರ್ಗಗಳನ್ನು ತಿಳಿಸಲೆತ್ನಿಸುತ್ತಾಳೆ.

ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು!
ತೃಷೆಯಾದರೆ ಕೆರೆ-ಬಾವಿ ಹಳ್ಳಂಗಳುಂಟು!
ಶಯನಕ್ಕೆ ಹಾಳು ದೇಗುಲವುಂಟು!
ಚೆನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು![4]

ಚೆನ್ನಮಲ್ಲಿಕಾರ್ಜುನನ ಒಲುಮೆಯಿಂದ ಪರಮ ಸುಖ ಲಭಿಸುತ್ತದೆ ಎಂದು ತಿಳಿಸಿ, ದೇಹ ಹಾಗೂ ಬದುಕಿನ ದ್ವಂದ್ವದಿಂದ ಕೂಡಿದ ಬಂಧನವನ್ನು ಮೀರಲೆತ್ನಿಸಿರುವುದನ್ನಿಲ್ಲಿ ಕಾಣಬಹುದು. ಜೊತೆಗೆ ಜೀವದ ಬಗೆಗಿನ ಭೀತಿಯಿಂದ ಮುಕ್ತವಾಗಿ ಸಾಧನೆಯ ಮಾರ್ಗ ಹೊಂದಬೇಕೆಂಬುದು ಈ ವಚನದ ಆಶಯವಾದಂತಿದೆ.

ಭಿಕ್ಷಾನ್ನ, ಕೆರೆ-ಬಾವಿ-ಹಳ್ಳ-ದೇಗುಲಗಳ ಅಸ್ತಿತ್ವವನ್ನು ಕುರಿತು ತಿಳಿಸಿ ಮನುಷ್ಯರು ಜೀವನದಲ್ಲಿ ಅನ್ಯಮಾರ್ಗವನ್ನೆಣಿಸುವ ಅಗತ್ಯವನ್ನು ತೊರೆಯಲಿರುವ ನ್ಯಾಯ ಮಾರ್ಗಗಳನ್ನು ಹೇಳುವಂತಿದೆ.

ಅಕ್ಕ ತನ್ನ ಮತ್ತೊಂದು ವಚನದಲ್ಲಿ ಮಾನವವಿಕಾಸ ಹಾಗೂ ಸಾಮಾಜಿಕ ಕ್ಷೇಮ ಸಾಧಿಸಲು ಸನ್ನಡತೆಯ ಅಗತ್ಯವನ್ನು ಕುರಿತು ಹೇಳುವಳು.

ಎಲ್ಲಿ ಹೋದರೂ ಕಲಿಗೆ ಭಯವಿಲ್ಲ
ಹಂದೆಗೆ ಸುಖವಿಲ್ಲ ಕೇಳಿರಣ್ಣ !
ಈವಂಗವಗುಣವಿಲ್ಲ, ಕರುಣವುಳ್ಳವಂಗೆ ಪಾಪವಿಲ್ಲ!
ಇನ್ನು ಪರಧನ ಪರಸ್ತ್ರೀಯ ತೊರೆದಾತಂಗೆ
ಮುಂದೆ ಭವವಿಲ್ಲ ಚೆನ್ನಮಲ್ಲಿಕಾರ್ಜುನ![5]

ಶೂರನಿಗೆ ಭಯವೆಂಬುದಿರದು. ಭಯಕ್ಕೆ ಹೇಡಿತನವೇ ಮೂಲವೆಂದು, ಅದರಿಂದ ಸುಖವು ಮರೀಚಿಕೆಯಾಗುವುದು. ಬದಲಿಗೆ ಕೊಡುವ ಗುಣಕ್ಕೆ ಅಪನಿಂದೆಗಳಿಲ್ಲ. ಕರುಣೆ ತೋರುವವನಿಗೆ ಪಾಪವಿಲ್ಲ. ಪರರ ವಸ್ತುಗಳಾದ ಧನ ಹಾಗೂ ಪರಸ್ತ್ರೀಯರನ್ನು ಗೌರವಭಾವದಿಂದ ಕಾಣುವಾತನಿಗೆ ಪುನಃ ಹುಟ್ಟೆಂಬುದಿಲ್ಲವೆಂದು ಅಕ್ಕ ಲೌಕಿಕವನ್ನು ಅಪೇಕ್ಷಿಸದೇ, ಅದರ ಹಂಗನ್ನು ತೊರೆಯುವ ಮಾರ್ಗವನ್ನು ಸ್ಪಷ್ಟಪಡಿಸಿದ್ದಾಳೆ.

ಹೀಗೆ ಅಕ್ಕ ನಿರ್ಭೀತಿಯಿಂದ ಸಮಾಜ ಜೀವನದ ಕ್ಷೇಮಕ್ಕೆ ನೇರವಾಗಿ ಪ್ರತಿಕ್ರಿಯಿಸಿದರೆ, ಮತ್ತೆ ಕೆಲವೊಮ್ಮೆ ನಿರ್ಲಿಪ್ತಳಂತೆ ಕಂಡುಬರುತ್ತಾಳೆ. ಹೀಗೆ ತನ್ನ ಅನುಭವದ ಜೀವನ ಸತ್ಯಗಳನ್ನು ಸಾಕ್ಷಾತ್ಕರಿಸುವಲ್ಲಿ ಅಕ್ಕನ ವಚನಗಳು ವಿಶೇಷವಾಗಿ ಒಡಮೂಡಿವೆ.

**ಅಕ್ಕಮ್ಮ**

ಅಕ್ಕಮಹಾದೇವಿಯಂತೆ ಅಕ್ಕಮ್ಮಳಲ್ಲೂ ಸಾಧಾರಣವಾಗಿ ಭಕ್ತಿ, ಪ್ರೇಮ, ಆಧ್ಯಾತ್ಮಚಿಂತನೆಗಳಿದ್ದು ಸಮಾಜದ ಬಗೆಗೆ ನಿರ್ಲಕ್ಷವಿದೆ ಎಂಬಂತೆ ತೋರಿದರೂ, ಸಮಾಜದ ಬಗೆಗೆ ತೀವ್ರ ಲಕ್ಷ್ಯವಿದೆ.

ಅಕ್ಕಮ್ಮನಿಗೆ ಆಚಾರವು ಮುಖ್ಯವಾಗಿ. ಆಚಾರ ತಪ್ಪಿದರೆ ಸರ್ವಸ್ವದ ಭಂಗ ಎನ್ನುತ್ತಾಳೆ. ಸದಾಚಾರದ ಬದುಕು ಹಾಗೂ ನಡವಳಿಕೆಗಳಿಂದ ಸಮಾಜದ ಸೌಖ್ಯ ಸಾಧ್ಯವೆಂದು, ಈ ಬಗೆಗೆ ಸಮಾಜವನ್ನು ಒಗ್ಗೂಡಿಸುವಲ್ಲಿ ಛಲವಂತಿಕೆಯಿರಬೇಕೆನ್ನುತ್ತಾಳೆ.

ಕಾಮಿಗೆ ವ್ರತವುಂಟೆ, ನಿಃಕಾಮಿಗಲ್ಲದೆ?
ಕ್ರೋಧಿಗೆ ವ್ರತವುಂಟೆ, ಸಮಾಧಾನಿಗಲ್ಲದೆ?
ಲೋಭಿಗೆ ವ್ರತವುಂಟೆ, ಉದಾರಿಗಲ್ಲದೆ?
ಇಂತೀಕ್ಷಮೆ ದಮೆ ಶಾಂತಿ ಸಮಾದಾನ ಸಂಪದ ಮುಂತಾಗಿ
ಗುರುಲಿಂಗ ಜಂಗಮಕ್ಕೆ, ತನುಮನಧನದಲ್ಲಿ ನಿರತನಾಗಿ,
ತನ್ನ ತ್ರಾಣಕ್ಕೆ ಇದ್ದಂತೆ ಚಿತ್ತಶುದ್ಧಾತ್ಮನಾಗಿ ಇಪ್ಪ ಮಹಾಭಕ್ತನೆ
ಕೃತ್ಯವಿಲ್ಲದ ಶರಣ.
ಆತನ ಪಾದ ಎನ್ನ ಹೃದಯದಲ್ಲಿ ಅಚ್ಚೊತ್ತಿದಂತಿಪ್ಪುದು
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವು
ಅವರುವ ಎತ್ತುಕಟ್ಟುವ ಗೊತ್ತಾಗಿಪ್ಪನು.[6]

ಇಲ್ಲಿ ಅಕ್ಕಮ್ಮ ಕಾಮ–ಕ್ರೋಧ, ಲೋಭ–ಮೋಹಗಳನ್ನುಳ್ಳ ಮನಸ್ಸು ಎಂದಿಗೂ ಸಮಾಜಕ್ಕೆ ಕಂಠಕಪ್ರಾಯವಾಗುವುದೆಂದು ನಿಧಾರ ಪೂರ್ವಕವಾಗಿ ಹೇಳಿದ್ದಾಳೆ. ಇಲ್ಲಿ ವ್ರತವೆಂಬುದು ವಿಶಾಲ ಅರ್ಥವನ್ನು ಹೊಂದಿ, ನಿಃಕಾಮಿ, ಸಮಾಧಾನಿ, ಉದಾರಿ, ಚಿತ್ತಶುದ್ದತೆ ಎಂದಾಗುತ್ತದೆ. ಈ ಸದ್ಗುಣಗಳನ್ನು ಹೊಂದಿ ಶಿವನಿಗೆ ಮತ್ತು ಸಮಾಜದ ಹಿತಕ್ಕೆ ತನು–ಮನ–ಧನವನ್ನರ್ಪಿಸಬೇಕೆನ್ನುತ್ತಾಳೆ. ಶಿವಭಕ್ತಿಯ ಮಾಡುತ್ತಲೆ ಸಮಾಜದೊಂದಿಗೆ ಹೊಂದಿರುವ ಅವಿನಾಭಾವ ಸಂಬಂಧವನ್ನು ಅಕ್ಕಮ್ಮನ ವಚನಗಳಲ್ಲಿ ಕಾಣಬಹುದಾಗಿದೆ.

**ಅಮುಗೆ ರಾಯಮ್ಮ**

ವಚನಚಳುವಳಿಯ ಸಂದರ್ಭದಲ್ಲಿ ಕೆಳವರ್ಗದವರೆನ್ನದೆ ಕಲ್ಪಿಸಿದ ಅವಕಾಶವನ್ನು ರಾಯಮ್ಮ ಕೈಬಿಡದೆ ಹೊಂದಿ ತನ್ನ ಗಂಭೀರ ವಿಚಾರಧಾರೆಯನ್ನು ವ್ಯಕ್ತಪಡಿಸುತ್ತಾಳೆ. ಇವಳಲ್ಲಿಯೂ ಸಾಮಾಜಿಕ ಕಾಳಜಿಯು ಮುಚೂಣಿಯಲ್ಲಿರುವುದನ್ನು ಗುರುತಿಸಬಹುದು.

ಎನ್ನ ಕಣ್ಣೊಳಗಣ ಕಟ್ಟಿಗೆಯ ಮುರಿವವರನಾರನೂಕಾಣೆ
ಎನ್ನ ಕಾಲೊಳಗಣ ಮುಳ್ಳ ತೆಗೆವವರನಾರನೂ ಕಾಣೆ
ಎನ್ನ ಅಂಗದಲ್ಲಿದ್ದ ಅಹಂಕಾರವ ಸುಡುವವರನಾರನೂ ಕಾಣೆ,
ಎನ್ನ ಮನದಲ್ಲಿಪ್ಪ ಮಾಯಾ ಪ್ರಪಂಚುವ
ಕೆಡಿಸುವವರನಾರನೂ ಕಾಣೆನಯ್ಯಾ
ಆದ್ಯರ ವೇದ್ಯರ ವಚನಂಗಳಿಂದ
ಅರೆದೆವೆಂಬವರು ಅರಿಯಲಾರರು ನೋಡಾ,
ಎನ್ನ ಕಣ್ಣೊಳಗಣ ಕಟ್ಟಿಗೆ ನಾನೆ ಮುರಿಯಬೇಕು
ಎನ್ನ ಕಾಲೊಳಗಣ ಮುಳ್ಳ ನಾನೆ ತೆಗೆಯಬೇಕು.[7]

ಪ್ರತಿಯೊಬ್ಬ ವ್ಯಕ್ತಿಯೂ ತಾನೇ ಬೆಳೆಯಿಸಿಕೊಂಡಿರುವ ಅಹಂಕಾರವನ್ನು, ತನ್ನ ಕಾರಣದಿಂದಲೇ ಮುಸುಕಿರುವ ಮಾಯಾ ಪ್ರಪಂಚವನ್ನು ತಾನೇ ಇಲ್ಲವಾಗಿಸಿಕೊಳ್ಳಬೇಕು. ಆದ್ಯರ ವಚನಗಳನ್ನು ಕೇಳಿದ ಮಾತ್ರಕ್ಕೆ ಅರಿವು ಮೂಡದು. ಕೇಳಿದ್ದಕ್ಕೆ ತಕ್ಕಂತೆ ನಡೆಯುವ ಅಂತಃಶಕ್ತಿಯನ್ನು ಬೆಳೆಯಿಸಿಕೊಳ್ಳಬೇಕು. ನೀತಿಯ ಮಾತು ನಿಷ್ಠೆಯಾಗಿ ಸಮಾಜದ ಕ್ಷೇಮವನ್ನು ಕಾಯ್ದುಕೊಳ್ಳಲೇಬೇಕೆಂಬ ಸಂಕಲ್ಪತೊಟ್ಟವಳಂತೆ ರಾಯಮ್ಮ ತೋರುತ್ತಾಳೆ.

ಸಮಾಜದಲ್ಲಿ ವ್ಯಕ್ತಿ ಹೇಗಿರಬೇಕು? ಹೇಗೆ ನಡೆಯಬೇಕೆಂಬುದನ್ನು ರಾಯಮ್ಮ ಈ ಕೆಳಗಿನ ವಚನದಲ್ಲಿ ನಿರ್ವಚಿಸುತ್ತಾಳೆ.

ಪಟ್ಟಣದ ಸೂಳೆಯ ಕೂಡೆ ಪರಬ್ರಹ್ಮವ ನುಡಿಯಲೇಕೆ?
ಸಂತೆಗೆ ಬಂದವರ ಕೂಡೆ ಸಹಜವ ನುಡಿಯಲೇಕೆ?
ಕತ್ತೆಯನೇರುವರ ಕೂಡೆ ನಿತ್ಯರಂತೆ ನುಡಿಯಲೇಕೆ?
ಹೊತ್ತು ಹೋಕರ ಕೂಡೆ ಕರ್ತನ ಸುದ್ದಿಯ ನುಡಿಯಲೇಕೆ?
ಅಮುಗೇಶ್ವರಲಿಂಗವನರಿದ ಶರಣಂಗೆ
ಹತ್ತು ಸಾವಿರವನೋದಲೇಕೆ?
ಹತ್ತು ಸಾವಿರವ ಕೇಳಲೇಕೆ?
ಭ್ರಷ್ಟರ ಕೂಡೆ ನುಡಿಯಲೇಕೆ?[8]

ರಾಯಮ್ಮ ಏಕೆ? ಎಂದು ಪ್ರಶ್ನಿಸುತ್ತಾ, ಬದುಕಿನ ಸಾರ್ಥಕತೆಯಿರುವುದು ಅರ್ಥವಂತಿಕೆಯ ನಡವಳಿಕೆಯಿಂದ ಎನ್ನುತ್ತಾಳೆ. ಪಟ್ಟಣದ ಸೂಳೆ, ಸಂತೆಗೆ ಬಂದವರ, ಕತ್ತೆಯನೇರುವವರ, ಹೊತ್ತು ಹರಣ ಮಾಡುವರ ಸಂಗವ ತೊರೆಯಬೇಕು. ಅವರಿಗೆ ನೀಡುವ ಉಪದೇಶವೂ ವ್ಯರ್ಥವೆಂದು ಹೆಚ್ಚು ತಿಳುವಳಿಕೆ ಉಳ್ಳವರೆಂದು ಮೆರೆವ ಭ್ರಷ್ಟರನ್ನು ಕೂಡಿ ನುಡಿಯಬಾರದೆಂದಿದ್ದಾಳೆ. ಈ ಬಗೆಯ ಭ್ರಷ್ಟರು ಸಮಾಜಕ್ಕೆ ಪಾತಕರಾಗಿ ಪರಿಣಮಿಸುವರೆಂದು ಅಂಥವರ ಬಗೆಗೆ ಎಚ್ಚರದಿಂದಇರಬೇಕೆಂಬ ರಾಯಮ್ಮನ ಚಿಂತನೆ ಗಮನಾರ್ಹವಾಗಿದೆ.

**ಆಯ್ದಕ್ಕಿ ಲಕ್ಕಮ್ಮ**

ಲಕ್ಕಮ್ಮ ಪ್ರತಿಯೊಬ್ಬರು ಕಾಯಕವನ್ನು ಕೈಗೊಳ್ಳುವ ಮೂಲಕ ಸಮಾಜದಲ್ಲಿನ ಬಡತನ ನಿವಾರಣೆ ಮಾಡಬಹುದೆನ್ನುತ್ತಾಳೆ. ಈ ವರೆಗೆ ಸ್ತ್ರೀಯರಿಗೆ ವೃತ್ತಿಸಂಬಂಧಿತ ವಿಚಾರದಲ್ಲಿ ಪಾಲ್ಗೊಳ್ಳಲು ಅವಕಾಶವಿರದಿದ್ದನ್ನು ಕಂಡು, ಹೆಣ್ಣಿನ ಸಹಭಾಗಿತ್ವದಿಂದ ಅವರ ಬದುಕು ಮತ್ತಷ್ಟು ಉತ್ತಮವಾಗುವುದೆಂದು, ಸ್ತ್ರೀ-ಪುರುಷರೆನ್ನದೆ ವೃತ್ತಿ ಕೈಗೊಂಡು, ಕಾಯಕಕ್ಕೆ ಮಹತ್ವ ನೀಡಬೇಕೆಂಬ ಅವಳ ವಾದಸರಣಿ ಇಂದಿಗೂ ಪ್ರಸ್ತುತ.

ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ

ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು
ಮಾರಯ್ಯಪ್ರಿಯ ಅಮಲೇಶ್ವರಲಿಂಗದ ಸೇವೆಯುಳ್ಳನ್ನಕ್ಕರ.[9]

ಯಾರೇ ಆಗಲಿ ಬೇಡಿ ತಿನ್ನದೇ, ದುಡಿದು ಉಣ್ಣುವವರಾಗಬೇಕು. ಸತ್ಯಯುತವಾದ ಕಾಯಕದಿಂದ ಬಡತನದೂರವಾಗಿ, ಮನಶುದ್ಧಿಯಿಂದ ದ್ರವ್ಯ ಲಭಿಸುತ್ತದೆಂದು, ಗುರಿಗಿಂತ ಸತ್ಯಯುಕ್ತವಾದ ಕರ್ತವ್ಯನಿಷ್ಠೆಗೆ ಪ್ರಾಮುಖ್ಯತೆ ನೀಡಬೇಕೆನ್ನುವ ಆಶಯವನ್ನು ಲಕ್ಕಮ್ಮ ವ್ಯಕ್ತಪಡಿಸುತ್ತಾಳೆ.

**ಮೋಳಿಗೆ ಮಹಾದೇವಿ**

ಮಹಾದೇವಿ ಅಂತರಂಗ-ಬಹಿರಂಗ ಶುದ್ಧಿಯಿಂದ ಅಧ್ಯಾತ್ಮಕ ಮಾರ್ಗದಲ್ಲಿ ಸಾಗಿ ಆತ್ಮಸಾಕ್ಷಾತ್ಕಾರ ಹೊಂದಬೇಕೆಂದು, ಇಡೀ ಸಮೂಹದ ಒಳಿತಿಗಾಗಿ ಕರೆಕೊಟ್ಟಿದ್ದಾಳೆ.

ಊರ್ವಸಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತು ಕೊಟ್ಟಡೆ ಮಚ್ಚುವರಲ್ಲದೆ,
ಹಂದಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತ ಕೊಟ್ಟಡೆ ಮಚ್ಚುವರೆ,
ಹುಡುಹುಡು ಎಂದಟ್ಟುವರಲ್ಲದೆ?
ನಡೆನುಡಿ ಶುದ್ಧವುಳ್ಳವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರಲ್ಲದೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರೆ?
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಆ ಹಂದಿಗಿಂತ ಕರಕಷ್ಟ,
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.[10]

ಮಹಾದೇವಿಯು ನೂರುಕಾಲ ಹಂದಿಯಂತೆ ಬಾಳಿದರೆ ಬರುವ ಪ್ರಯೋಜನವಾದರೂ ಏನು? ಎಂದಿದ್ದಾಳೆ. ನಾಲ್ಕೇ ದಿನ ಬದುಕಿದರು ಆದರ್ಶಪ್ರಾಯವಾದ ಬದುಕಿಗೆ ಮಾನ್ಯತೆ ದೊರೆಯುವುದು. ಆ ಕಾರಣ ನುಡಿಯಂತೆ ನಡೆಯದೇ ಪುರಾತನರ ವಚನವ ಓದಿದರೆ ಫಲವಿಲ್ಲವೆಂದು, 'ವಚನ'ಗಳಿಗಿಂತ ವಚನಗಳಲ್ಲಿ ಅಡಕವಾಗಿರುವ ನೀತಿಯ ಅಳವಡಿಕೆ ಬಹು ಮುಖ್ಯವೆಂದಿದ್ದಾಳೆ. ಒಳ್ಳೆಯ ನಡವಳಿಕೆಗೆ ಸರ್ವಕಾಲಕ್ಕೂ ಮಾನ್ಯತೆಯಿದೆ ಎಂದು ಹೇಳುತ್ತಾ, ಒಟ್ಟು ಸಾಮಾಜಿಕ ವ್ಯವಸ್ಥೆಯ ಮತ್ತು ಜನಜೀವನದ ಒಳಿತಿಗಾಗಿ ಕೈಕೊಳ್ಳಬೇಕಾದ ಕರ್ತವ್ಯವನ್ನು ಮನವರಿಕೆ ಮಾಡಿಕೊಡುತ್ತಾಳೆ.

**ಹಡಪದ ಪುಣ್ಯಸ್ತ್ರೀ ಲಿಂಗಮ್ಮ**

ಸಾಮಾನ್ಯ ಸ್ತರದಿಂದ ಬಂದು ತತ್ವಬೋಧಾತ್ಮಕ ವಚನಗಳನ್ನು ರಚಿಸುವ ಮಟ್ಟಕ್ಕೆ ಬೆಳೆದಿರುವುದಕ್ಕೆ ಲಿಂಗಮ್ಮ ನಿದರ್ಶನಳಾಗಿದ್ದಾಳೆ. ಈಕೆಯ ಬೋಧೆಯ ವಚನವೊಂದರಲ್ಲಿ ಬಂಡಾಯ ಗುಣಧರ್ಮವಿರುವುದನ್ನು ಕಾಣಬಹುದು.

ಮರ್ತ್ಯದ ಮನುಜರು ಸತ್ತರೆಲ್ಲ!
ಕತ್ತಲೆಯೊಳು ಮುಳುಗಿ, ಮಾತು ಕಲಿತುಕೊಂಡು,
ತೂತುಬಾಯೊಳಗೆ ನುಡಿದು, ಕಾತರಿಸಿ ಕಂಗೆಟ್ಟು,
ಹೇಸಿಕೆಯ ಮಲದ ಕೊಣದ ಉಚ್ಚೆಯ ಬಾವಿಗೆ ಮೆಚ್ಚಿ,
ಕಚ್ಚೆಯಾಡಿ ಹುಚ್ಚುಗೊಂಡು ತಿರುಗುವ ಕತ್ತೆಮನುಜರ
ಮೆಚ್ಚರು ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.[11]

ಮನುಷ್ಯ ಲೋಕದಲ್ಲಿ ಹುಟ್ಟಿದ ಮೇಲೆ ಕೊನೆಗೊಂದು ದಿನ ಸಾಯಲೇಬೇಕು. ಆದರೆ ತನ್ನ ತಿಳಿಗೇಡಿತನದಿಂದ ಬದುಕಿರುವಾಗಲೇ ಹೀನಾಯವಾಗಿ ಸತ್ತಂತಾಗುವನು. ಅಂಧಕಾರದಲ್ಲಿ ಮುಳುಗಿ ಆಡಬಾರದ ಮಾತನ್ನಾಡಿ ನಡೆ-ನುಡಿಯಲ್ಲಿ ಏಕಭಾವವಿರದೆ ಕಂಗೆಟ್ಟು ಹಾದಿತಪ್ಪುವನು. ಹೀಗೆ ಹಾದಿತಪ್ಪಿ ಮಾಡುವ ಕೃತ್ಯ ಹೇಸಿಗೆಯ ಮಲದ ಕೆರೆ ಹಾಗೂ ಉಚ್ಚೆಯ ಬಾವಿಯನ್ನು ಮೆಚ್ಚಿದಂತಾವುದು ಎಂದಿದ್ದಾಳೆ. ಕತ್ತೆಯಂತಹ ಪ್ರಾಣಿಯನ್ನು ಪಳಗಿಸಿ, ತನ್ನ ಹತೋಟಿಗೆ ತೆಗೆದುಕೊಳ್ಳುವ ಸಾಮರ್ಥ್ಯವಿರುವ ಮನುಷ್ಯರು ಕ್ಷುಲ್ಲಕ ಪ್ರಾಣಿಯಂತೆ ನಡೆಯುವುದನ್ನು ಕಟುವಾಗಿ ಟೀಕಿಸಿ. ಹುಚ್ಚುತನದಿಂದ ಸಮಾಜದ ನೆಮ್ಮದಿಯನ್ನು ಹಾಳುಮಾಡುವವರನ್ನು ಲಿಂಗಮ್ಮ ಕತ್ತೆ ಮನುಜರೆಂದಿದ್ದಾಳೆ.

ಸಮಾಜದಲ್ಲಿ ಅನಾಚಾರ. ಅಜ್ಞಾನ ಬುದ್ಧಿಹೀನತೆಯಂತಹ ಉಪಟಳಗಳನ್ನು ಏರುದನಿಯಲ್ಲಿ ಟೀಕಿಸುವ ಲಿಂಗಮ್ಮನಿಗೆ ಸಮಾಜದ ಕಲ್ಯಾಣ ಮುಖ್ಯವಾದ ಕಾಳಜಿಯಾಗಿರುವುದನ್ನು ಗುರುತಿಸಬಹುದು.

**ಕಾಟಕೊಟಯ್ಯಗಳ ಪುಣ್ಯಸ್ತ್ರೀ ರೇಚವ್ವೆ**

ವ್ರತಾಚಾರವನ್ನು ಪುರಸ್ಕರಿಸುವ ರೇಚವ್ವೆ ತನ್ನ ವಚನದಲ್ಲಿ, ಸಮಾಜದಲ್ಲಿ ಧರ್ಮದ ಹಾಗೂ ಭಕ್ತಿಯ ಹೆಸರಲಾಗುತ್ತಿದ್ದ ವಂಚನೆಗಳನ್ನು ಕಂಡು ಕಾಣದಂತೆ. ತಪ್ಪೆಂದು ತಿಳಿದಿದ್ದರೂ ಹೊಂದಾಣಿಕೆ ಮಾಡಿಕೊಂಡು ಸಾಗುವ ಪ್ರವೃತ್ತಿ ನಿಲ್ಲಬೇಕೆಂದಿದ್ದಾಳೆ. ಬೇರೆಯವರಿಗೆ ಉಪದೇಶ ಮಾಡುವ ಮೊದಲು. ತಮ್ಮಲ್ಲಿನ ನೈತಿಕ ಪ್ರಜ್ಞೆ ಜಾಗೃತಗೊಳ್ಳಬೇಕಾದ ಅವಶ್ಯಕತೆಯಿದೆ ಎಂಬ ಅಭಿಪ್ರಾಯ ಹೊಂದಿದ್ದಾಳೆ. ನೀನು ಏನಾದರೂ ಮಾಡು. ನಾನೊಲ್ಲೆ ಎನ್ನುವ ದಿಟ್ಟ ಮಹಿಳೆಯಾಗಿ

ಕಾಣಬರುತ್ತಾಳೆ. ತನ್ನ ಒಂದೇ ವಚನದಲ್ಲಿ ಇಡೀ ಮಾನವಕುಲದ ಉದ್ಧಾರದ ಸಾರವನ್ನು ಹೇಳುವವಳಾಗಿ ಕಾಣಬರುತ್ತಾಳೆ.

ಬಂಜೆಯಾವಿಂಗೆ ಕ್ಷೀರವುಂಟೆ?
ವ್ರತಹೀನನ ಬೆರೆಯಲುಂಟೆ?
ನೀ ಬೆರೆದಡೂ ಬೆರೆ; ನಾನೊಲ್ಲೆ ನಿಜಶಾಂತೇಶ್ವರಾ.[12]

ರೇಚವ್ವೆ ಬಂಜೆ ಹಾವು ಬದುಕುವುದು; ಹಾಗೆಯೇ ವ್ರತಹೀನನೂ ಬಾಳುವನು. ಬಂಜೆ ಹಾವಿಗೆ ಹೇಗೆ ಸಂತಾನವಿಲ್ಲವೋ ವ್ರತಹೀನನಿಗೂ ಮೋಕ್ಷಸಾಧನೆಯಾಗದು ಎಂದು ವ್ರತಾಚರಣೆ ನಡೆಸಬೇಕೆಂದಿದ್ದಾಳೆ. ಹಾವು ಹೇಗೆ ವಿಷಪೂರಿತವೋ ಹಾಗೆ ವ್ರತಹೀನನೂ ದುಷ್ಟನೆಂದು ಅಭಿಪ್ರಾಯಪಟ್ಟಿದ್ದಾಳೆ. ಹಾವ ಸ್ನೇಹದಂತೆ ವ್ರತಹೀನನ ಸಂಗವೆಂದು, ಈ ಬಗೆಯ ಸ್ನೇಹಸಂಗ ತನಗೆ ಅವಶ್ಯಕವಲ್ಲವೆಂದಿದ್ದಾಳೆ.

**ವಚನಕಾರ್ತಿಯರು ಕಂಡುಕೊಂಡ ಸಾಮಾಜಿಕ ಸಮನ್ವಯ ದೃಷ್ಟಿ**

ಶರಣರು ವಿಚಾರವಂತರಾಗಿ ರೂಢಿಗತ ವ್ಯವಸ್ಥೆಯನ್ನು ಪ್ರಶ್ನಿಸಿ, ಒಪ್ಪಿತ ಮೌಲ್ಯವೆಂಬ ಹೆಸರಿನಲ್ಲಿ ಆಗುತ್ತಿದ್ದ ಕಂದಾಚಾರವನ್ನು ಪ್ರತಿಭಟಿಸಿದರು. ಹಾಗೆ ಪ್ರತಿಭಟಿಸಿ ಸ್ತ್ರೀ ಪರ ಧೋರಣೆಯನ್ನು ಹೊಂದಿ ನೂತನ ಹಾದಿಯನ್ನು ತೋರಿದರು. ಆ ಮಾರ್ಗವನ್ನು ಕ್ರಮಿಸಿದ ಸ್ತ್ರೀಯರು ಸೂಕ್ಷ್ಮಸಂವೇದನೆ ಉಳ್ಳವರಾದ ಕಾರಣ ವಚನಮೂಲಕ ವಿಶಿಷ್ಟ ಬಗೆಯಲ್ಲಿ ತನ್ನ ವ್ಯಕ್ತಿತ್ವವನ್ನು ಅನಾವರಣಗೊಳಿಸಿದರು.

ಪುರುಷ ಪ್ರಧಾನ ವ್ಯವಸ್ಥೆಯಲ್ಲೆ ವಿಶಿಷ್ಟದನಿಯಾಗಿ, ಆಲೋಚಿಸುವ ಸಮಾಜದ ಅನೀತಿಯನ್ನು ತಿದ್ದುವ, ನಿರ್ಭಯವಾಗಿ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸುವ ಶಕ್ತಿಯನ್ನು ಪಡೆದರು.

ಹೀಗೆ ವಿಶಿಷ್ಟ ಸಂಸ್ಕೃತಿಯನ್ನು ಕಟ್ಟಿಕೊಡಲು ಮುಂದಾದ ವಚನಕಾರ್ತಿಯರು ಕೇವಲ ಸ್ತ್ರೀ ಸಮುದಾಯವನ್ನಷ್ಟೆ ಅವಲೋಕಿಸದೆ ಇಡೀ ಸಮಾಜದ ಪೊಳ್ಳು ವಿಧಿ–ವಿಧಾನಗಳ, ಆಚರಣೆಯ, ಶೋಷಣೆಯ ವಿರುದ್ಧ ಗಂಭೀರ ಚಿಂತನೆಗಳನ್ನು ನಡೆಸಿ ಹೋರಾಡಿದರು. ಈ ಬಗೆಯಲ್ಲಿ ಹೋರಾಟ ನಡೆಸಲೆತ್ನಿಸಿದ್ದು ಅಂದಿನ ಸ್ತ್ರೀ ಸಮುದಾಯದಲ್ಲಾದ ವೈಚಾರಿಕ ಜಾಗೃತಿಯ ಕುರುಹಾಗಿದೆ.

## ಅಡಿಟಿಪ್ಪಣಿ


1. ಬಸವಣ್ಣನವರ ವಚನಗಳು ಸಂ. ಡಾ॥ ಆರ್.ಸಿ.ಹಿರೇಮಠ ಪುಟ. 98. ವಚನ 235.
2. ಅಕ್ಕನ ವಚನಗಳು ಸಂ. ಡಾ॥ ಎಲ್ ಬಸವರಾಜು. ಪುಟ. 74, ವಚನ 106.
3. ಅಕ್ಕನ ವಚನಗಳು ಸಂ. ಡಾ॥ ಎಲ್ ಬಸವರಾಜು. ಪುಟ. 74–75, ವಚನ 109
4. ಅಕ್ಕನ ವಚನಗಳು ಸಂ. ಡಾ॥ ಎಲ್ ಬಸವರಾಜು. ಪುಟ. 102 ವಚನ. 199
5. ಅಕ್ಕನ ವಚನಗಳು ಸಂ. ಡಾ॥ ಎಲ್ ಬಸವರಾಜು. ಪುಟ. 98 ವಚನ 185
6. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 142 ವಚನ 33
7. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 193. ವಚನ 26
8. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 207. ವಚನ 76
9. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ.223. ವಚನ 21
10. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 340, ವಚನ 13
11. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 394. ವಚನ 59
12. ಶಿವಶರಣೆಯರ ವಚನ ಸಂಪುಟ ಸಂ. ಡಾ॥ ವೀರಣ್ಣರಾಜೂರ ಪುಟ. 234. ವಚನ 1

# ಅಧ್ಯಾಯ – 4

## ವಚನಕಾರ್ತಿಯರಲ್ಲಿ ಧರ್ಮದ ಪರಿಕಲ್ಪನೆ
## (ಪ್ರತಿಭಟನೆಯ ಸ್ವರೂಪದ ಹಿನ್ನೆಲೆಯಲ್ಲಿಯಾಗಿದೆ)

"ಧರ್ಮ " ಪದ ಭಾರತೀಯ ದರ್ಶನ, ನೀತಿ ಮತ್ತು ಸಾಮಾಜಿಕ ವ್ಯವಸ್ಥೆಗೆ ನೇರವಾಗಿ ಸಂಬಂಧಿಸಿದ್ದು. 'ಧರ್ಮ' ಎಂಬ ಪದಕ್ಕೆ ಸಂವಾದಿಯಾಗಿರುವ ಇಂಗ್ಲೀಷಿನ 'ರಿಲಿಜಿಯನ್' ಎಂಬ ಪದವು, ಲ್ಯಾಟಿನ್ ಭಾಷೆಯ ನಾಮಪದ 'ರಿಲಿಗೋ' ಎಂಬುದರಿಂದ ಹುಟ್ಟಿದೆ. 'ರಿಲಿಗೋ' ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳಿವೆ. ಭಕ್ತಿಯಿಂದ ಕೂಡಿದ ಪವಿತ್ರ ಪೂಜಾ ಕೈಂಕರ್ಯ ಎಂಬುದು ಒಂದು ಅರ್ಥ; ಒಟ್ಟುಗೂಡಿಸು, ಆಯ್ಕೆಯಾಗು, ಹತ್ತಿರದ ಸಂಬಂಧ ಹೊಂದು – ಈ ಮೂರೂ ಕ್ರಿಯಾ ಪದಗಳ ಅರ್ಥಗಳೆಲ್ಲವನ್ನೂ ಒಳಗೊಂಡು 'ರಿಲಿಗೋ' ಎಂಬ ನಾಮಪದ ಹುಟ್ಟಿದೆ. "Religion" ಎಂದರೆ ಲ್ಯಾಟಿನ್ ಭಾಷೆಯಲ್ಲಿ "reverence" (ಪೂಜ್ಯ) ಎಂದು ಅರ್ಥವಿರುವುದರಿಂದಾಗಿ, ರಿಲಿಜಿಯನ್ ಎಂದರೆ ಪೂಜ್ಯ ಅಥವಾ ಪವಿತ್ರವಾದದ್ದು ಎಂದು ಅರ್ಥವಾಗಬಹುದು.[1]

"Religion" ಪದಕ್ಕಿರುವ ಅರ್ಥವ್ಯಾಪ್ತಿಗಿಂತ ಸಂಸ್ಕೃತ ಭಾಷೆಯ 'ಧರ್ಮ'ಕ್ಕಿರುವ ಅರ್ಥ ನಿರ್ದಿಷ್ಟವಾಗಿದೆ ಎನ್ನಬಹುದು. "ಧರ್ಮ "ಪದವು ಸಂಸ್ಕೃತದ ಮೂಲಧಾತು "ಧೃ"ಎಂಬುದರಿಂದ ಬಂದಿದೆ. "ಧೃ"ಎಂದರೆ 'ಧರಿಸು','ಎತ್ತಿಹಿಡಿ' ಅಥವಾ ಬೆಂಬಲಿಸು ಎಂದಾಗುತ್ತದೆ.[2]

ಋಗ್ವೇದದಲ್ಲೂ 'ಧರ್ಮ'ಪದದ ಮೂಲಭೂತ ಪರಿಕಲ್ಪನೆ 'ಋತ್ ಎನ್ನುವ ತತ್ವದಿಂದ ವಿಕಾಸ ಹೊಂದಿದೆ. ಇಲ್ಲಿ ಅದರ ಅರ್ಥ ಬ್ರಹ್ಮಾಂಡ ನಿಯತಿ ಎಂದೂ ಮತ್ತು ಮಾನವರ ನಡುವ ಳಿಕೆಯಲ್ಲಿ ಅಡಕವಾಗಿರಬೇಕಾದ ನೈತಿಕ ಕ್ರಮ ಎಂದೂ ಆಗುತ್ತದೆ.[3]

ಹಾಗೆ ನೋಡುವುದಾದರೆ, . "ಧರ್ಮ "ಶಬ್ದಕ್ಕೆ ಹಲವಾರು ಅರ್ಥಗಳಿವೆ. ರೂಢಿಯ ಆಚರಣೆ, ನಿಬಂಧನೆ, ಸದ್ಗುಣ, ಒಳ್ಳೆಯ ಕಾರ್ಯಗಳು, ಕರ್ತವ್ಯ. ನಿಯಮಿತವಾದ ಕಾರ್ಯಶೀ ಲತೆ, ಋಜುತ್ವ (right), ನ್ಯಾಯ, ಧರ್ಮಶ್ರದ್ಧೆ(piety), ಸರ್ವಸಮತೆ, ಶಿಷ್ಟಾಚಾರ, ನೈತಿ ಕತೆ, ಸ್ವರೂಪ (nature), ಪ್ರವೃತ್ತಿ(disposition), ಚಾರಿತ್ರ್ಯ ಮೂಲಭೂತ ಲಕ್ಷಣ, ಗುಣ, ಯಜ್ಞ ವರ್ತನೆ, ಪುರಷಾರ್ಥ (values) ಇತ್ಯಾದಿ.[4]

Religion : "Religion of human beings to god or the god's or to whatever they consider sacred or in some cases, nearly supernatural" [5] ಎಂಬ ಅಭಿಪ್ರಾಯವಿದೆ.

ಹೀಗೆ "ಧರ್ಮ "ದ ಕಲ್ಪನೆಗೆ ವಿಶಾಲ ಅರ್ಥವಿದ್ದು ಬಹು ಹಿಂದಿನಿಂದಲೂ ಅಸ್ತಿತ್ವವನ್ನು ಹೊಂದಿದೆ. ಆದರೆ ಕಾಲಕ್ರಮೇಣ ಸಂಕುಚಿತ ಅರ್ಥವಂತಿಕೆಯನ್ನು ಪಡೆಯಿತು.

ವ್ಯಕ್ತಿತ್ವ ನಿರ್ಮಾಣ ಮಾಡುವಲ್ಲಿ ಪ್ರತಿಯೊಂದೂ 'ಧರ್ಮ'ವೂ ಪರಿಪೂರ್ಣತೆ ಸಾಧಿಸಲು ಅನುವು ಮಾಡಿಕೊಡುವ ಅಂಶವಾಗಿದೆ. ಆ ಕಾರಣ ವ್ಯಕ್ತಿಯು ತಾನೊಂದು ಅತಿಮಾನುಷ, ಪಾರಮಾರ್ಥಿಕ ಶಕ್ತಿಯ ಬಗೆಗೆ ಪ್ರಜ್ಞೆ ಹೊಂದಿ, ಮುಖ್ಯವಾಗಿ ತನ್ನ ಭಕ್ತಿ-ವಿಧೇಯತೆಗಳು ಸಲ್ಲ ತಕ್ಕ ದೇವರು ಒಬ್ಬನಿದ್ದಾನೆಂದು ನಂಬಿಕೆ ಹೊಂದಿ ಧರ್ಮವನ್ನು ಚಾಚೂ ತಪ್ಪದೇ ಪಾಲಿಸುವಂತೆ ಮಾಡಬೇಕೆನ್ನುವುದು ಧರ್ಮದ ಮುಖ್ಯ ಉದ್ದೇಶವಾದಂತಿದೆ.

ಒಟ್ಟಿನಲ್ಲಿ ವ್ಯಕ್ತಿಯೊಬ್ಬ ಧರ್ಮ ಮಾರ್ಗದಲ್ಲಿ ಕರ್ತವ್ಯ ನಿರತನಾಗುವಂತೆ, ಸದಾಚಾರ ಹಾಗೂ ಒಳ್ಳೆಯ ನಡವಳಿಕೆಯನ್ನು ಕಾಯ್ದುಕೊಳ್ಳಲು ನಮ್ಮ ಹಿರಿಯರು ಧರ್ಮ ಸಿದ್ಧಾಂತವನ್ನು ರೂಢಿಸಿದರೆಂದು ತೋರುತ್ತದೆ.

**ಧರ್ಮದ ಬಗೆಗಿನ ಕೆಲವು ಅಭಿಪ್ರಾಯಗಳು ಹೀಗಿವೆ :**

1. "ಮತಧರ್ಮವು ಮನಸ್ಸಿನ ಒಂದು ಮನೋಧರ್ಮವಾಗಿದ್ದು ಮಾನವ ಅನಂತವನ್ನು ಗ್ರಹಿಸಲು ಸಾಧ್ಯವಾಗುತ್ತದೆ. "[6]

ಮ್ಯಾಕ್ಸ್ ಮುಲ್ಲರ್

2. "ಧರ್ಮವು ಒಂದು ಬಗೆಯ ಜೀವನ ಅಥವಾ ಅನುಭವ, ಈ ಅನುಭವ ಒಂದು ಭಾವನಾತ್ಮಕವಾದ ಪುಳಕವಲ್ಲ, ಮಾನಸಿಕ ಭ್ರಾಂತಿಯಲ್ಲ, ಅದು ಪರವಸ್ತುವಿನೊಂದಿಗೆ ಒಟ್ಟು ವ್ಯಕ್ತಿತ್ವದ ಅಖಂಡ ಆತ್ಮಾನುಸಂಧಾನ. "[7]

ಎಸ್. ರಾಧಾಕೃಷ್ಣ-ಹಿಂದೂ ವ್ಯೂ ಆಫ್ ಲೈಫ್

3. "ಮನುಷ್ಯನಿಗೆ ಶಾಂತಿಯನ್ನು ತಂದುಕೊಡುವುದೇ ಧರ್ಮದ ಮೂಲೋದ್ದೇಶ. ಮುಂದಿನ ಜನ್ಮದಲ್ಲಿ ಸುಖ ಸಿಕ್ಕಬಹುದೆಂದು ಈ ಜನ್ಮದಲ್ಲಿ ನರಳುವುದು ಬುದ್ಧಿವಂತಿಕೆಯಲ್ಲ, ಇಲ್ಲೇ - ಈಗಲೇ ಶಾಂತಿದೊರಕುವಂತಾಗಬೇಕು. ಯಾವ ಧರ್ಮ ಇದನ್ನು ತಂದುಕೊಡಬಲ್ಲದೋ ಅದೇ ನಿಜವಾದ ಧರ್ಮ. "[8]

ಸ್ವಾಮಿ ವಿವೇಕಾನಂದ

**ವಚನಕಾರರಲ್ಲಿ ಧರ್ಮದ ಸ್ವರೂಪ**

ಭಾರತದಲ್ಲಿ ಧರ್ಮ ಎಂಬುದು ಹಲವು ಅವಸ್ಥಾಂತರಗಳಲ್ಲಿ ಸಾಗಿ, ಕಲ್ಪನೆಗೆ ನಿಲುಕದಷ್ಟು ನಮ್ಮ ಸಾಂಸ್ಕೃತಿಕ ಇತಿಹಾಸದ ಹಾಸುಹೊಕ್ಕಾಗಿದೆ. ಲೋಕ ನಿಯಮದ ಆದರ್ಶವೇ ಧರ್ಮವಾಗಿರುವ ಪರಿಯನ್ನು ವಚನಕಾರರಲ್ಲಿ ಮೊಟ್ಟಮೊದಲಿಗೆ ಗುರುತಿಸಬಹುದು. ಇಲ್ಲಿ ಮಾನವತಾವಾದ ಮುಖ್ಯವಾಗಿ ಧರ್ಮ ಹಾಗೂ ಸಾಮಾಜಿಕ ಸಂದರ್ಭಗಳಿಗೂ ಒಂದು ಬಗೆಯ ಅವಿನಾಭಾವ ಉಂಟಾಗಿದೆ.

ವಚನಕಾರರು ಸೃಷ್ಟಿಯ ಬಗೆಗೆ ಮಾನವೀಯ ಮೌಲ್ಯಗಳು, ಸರ್ವಸಮಾನತೆ, ಸೃಷ್ಟಿಯ ಬಗೆ ಸಹಾನುಭೂತಿ, ಸ್ವಾತಂತ್ರ್ಯವಾಗಿ ಅಭಿವ್ಯಕ್ತಿಸುವ ಸಾಧ್ಯತೆಗಳು ಸಮಾಜದ ಸಹಜ ಧರ್ಮವಾದರೆ, ಸುಖೀ ಸಮಾಜ ನಿರ್ಮಾಣವಾಗುತ್ತದೆಂಬ ಹೊಸ ಬಗೆಯ ಆಶಯವನ್ನು ಹೊಂದಿದ್ದರು. ಜೀವನದ ಸಮಸ್ಯೆಗಳ ನಿವಾರಣೆಯ ಉಪಾಯಗಳೆಂಬಂತೆ, ವಿಚಾರವಂತಿಕೆಯ ಧರ್ಮ ಬೋಧನೆಯನ್ನು ಮಾಡಿದರು.

ವಚನಕಾರರಲ್ಲಿ 'ಧರ್ಮ'ಎಂದರೆ, ನೀತಿಯಂತೆ ನಡೆಯುವುದಾಗಿದೆ. ಅಂತರಂಗಕ್ರಿಯೆಗಳನ್ನು ಪರಿಶುದ್ಧಗೊಳಿಸಲು ಸಹಾಯಕವಾದ ಕ್ರಿಯೆ, ಜ್ಞಾನ, ಭಾವ, ಸತ್ಯ, ತ್ಯಾಗ, ಸರ್ವೋದಯಗಳೆಂಬ ಆಚಾರಗಳನ್ನು ಪಾಲಿಸುವುದಾಗಿದೆ.

**ಹನ್ನೆರಡನೇ ಶತಮಾನದಲ್ಲಿ ಹರಿದು ಬಂದ ಸಮಾಜ ಕಲ್ಯಾಣ ಚಿಂತನೆಗಳು :-**

ಸಮಾಜದ ಕಲ್ಯಾಣವನ್ನು, ಸಾಮಾಜಿಕ ಸಮಾನತೆಯನ್ನು ಸಾಧಿಸುವ ಶಕ್ತಿ ವಚನಕಾರರಿಗೆ ಇದ್ದಿತ್ತಾದರೂ, ಸಮಾಜದಲ್ಲಿ ಧಾರ್ಮಿಕ ಸಾಂಸ್ಕೃತಿಕ ಪರಿಸ್ಥಿತಿ ಹದಗೆಟ್ಟಿತ್ತು.

ಕುರುಡು ಆಚರಣೆ, ಅಜ್ಞಾನದಿಂದ ಕುಲ-ಮತ ಪಂಥಗಳ ಶ್ರೇಣೀಕರಣ, ಬಹುದೇವತಾರಾಧನೆ, ವೃತ್ತಿಯಲ್ಲಿನ ಮೇಲು-ಕೀಳು ಭಾವನೆ, ಭಾಷೆಗಳ ಉನ್ನತೀಕರಣಗಳು ಸಮಾಜದ ಹಾಸುಹೊಕ್ಕಾಗಿದ್ದವು. ಮತೀಯ ಭಾವ ಮೇಲುಗೈ ಸಾಧಿಸಿ, ಸಾಮಾಜಿಕ, ವಿಷಮತೆ ಉಂಟಾಯಿತು. ಧಾರ್ಮಿಕ ಶೃಂಖಲೆಗಳ ಸರಮಾಲೆಯನ್ನು ಸ್ತ್ರೀಯರ ಮೇಲೆ ಹೊರಿಸಿ, ಮೋಕ್ಷಕ್ಕೆ ಅನರ್ಹಳೆಂದು ಭಾವಿಸಲಾಗಿತ್ತು. ಸ್ತ್ರೀಗೆ ಸ್ವಾತಂತ್ರ್ಯವೆಂಬುದಿಲ್ಲವೆಂದು ಕೀಳಾಗಿ ಪರಿಭಾವಿಸಲಾಗಿತ್ತು.

ಈ ಎಲ್ಲಾ ಅಧರ್ಮ ಹಾಗೂ ಅನಾಚಾರಗಳನ್ನು ಕಳೆದುಹಾಕುವ ಆಶಯವನ್ನು ಹೊತ್ತು ವಚನಕಾರರು ತಮ್ಮ ವಚನಗಳ ಮೂಲಕ ಜನಜಾಗೃತಿಯ ಚಿಂತನೆಗಳನ್ನು ಅಭಿವ್ಯಕ್ತಿಸಿದರು. 'ದಯೆಯೇ ಧರ್ಮ'ವೆಂದು ಮಾನವತೆಯ ಸಾರವನ್ನು ಸಾರಿದರು.

**ವಚನಕಾರ್ತಿಯರಲ್ಲಿ ಧರ್ಮ**

ವಚನಕಾರ್ತಿಯರಲ್ಲಿ ವೀರಶೈವ ಧರ್ಮದ ವಿವೇಚನೆ ಬಹುಪಾಲು ಇಲ್ಲವೆಂದೇ ಹೇಳಬಹುದು. ಅದಕ್ಕೆ ಬದಲಾಗಿ, ಸಕಲ ಜೀವಿಯೂ ಹೊಂದಬೇಕಾದ ನಡವಳಿಕೆಯ, ವ್ರತಾಚಾರದ ಕರ್ತವ್ಯದ ಮಾನವ ಧರ್ಮವೊಂದಿದೆ ಎಂದಿದ್ದಾರೆ. ಈ ಕುರಿತಾದ ಚಿಂತನೆಗಳನ್ನು ಬಿಡಿಬಿಡಿ

ಯಾಗಿ ಅವರ ವಚನಗಳಲ್ಲಿ ಕಾಣಬಹುದು.

ವಾಕ್ ಸ್ವಾತಂತ್ರ್ಯವನ್ನು ಪಡೆದ ಮಹಿಳೆಯರು – ಧಾರ್ಮಿಕ ಆಚರಣೆಗಳು, ವಿಚಾರ ಶೀಲತೆಯನ್ನು ಕಳೆದುಕೊಂಡು, ಯಾಂತ್ರಿಕಗೊಳ್ಳುತ್ತಿರುವುದನ್ನು ಗುರುತಿಸಿದರು. ಜಾತಿ-ವರ್ಣ-ವರ್ಗ. ಪಕ್ಷಪಾತ, ಶೋಷಣೆ, ಮೂಢನಂಬಿಕೆ, ಡಾಂಬಿಕ ವ್ರತಾಚರಣೆಯನ್ನು ಖಂಡಿಸಿ ನಿರಾಕರಿಸಿದರು. ಅರ್ಥವಂತಿಕೆಯ ಹಾಗೂ ಮಾನವೀಯ ಮಾನದಂಡಗಳನ್ನು ಬಳಸಿ ಕೊಂಡು ಸಾಮಾಜಿಕ ಸೌಖ್ಯವನ್ನು ತಮ್ಮ ಗುರಿಯನ್ನಾಗಿಸಿಕೊಂಡು, ಹೊಸ ಬಗೆಯ ಸಾಧನೆಯ ಮಾರ್ಗವನ್ನು ರೂಢಿಸಿಕೊಂಡರು.

**ವಚನಕಾರ್ತಿಯರಲ್ಲಿ ಒಪ್ಪಿದ ಮೌಲ್ಯಗಳ ಮುಖೇನ ಹೇರಲಾಗಿದ್ದ ಒತ್ತಾಯಗಳ ನಿರಾಕರಣೆ :-**

**ಅಕ್ಕಮಹಾದೇವಿ.**

ಆ ಕಾಲಕ್ಕೆ ಸ್ತ್ರೀಯೋರ್ವಳು ತೋರಿದ ಆಧ್ಯಾತ್ಮಿಕ ಸಾಧನೆ ಹಾಗೂ ಮಾನವೀಯ ಧೋರಣೆಯಿಂದಾಗಿ, ಅಕ್ಕಮಹಾದೇವಿ ಅಸಾಧಾರಣಳೆನಿಸಿದಳು. ಇವಳು ಕೊಟ್ಟ ಪರಂಪರೆಯ ನಿರ್ವಚನಗಳು, ಲೌಕಿಕದ ಆಗು-ಹೋಗುಗಳ ಬಗೆಗೆ ತಳೆದ ಪ್ರತಿರೋಧವು ಆಶ್ಚರ್ಯದಾಯಕ ವಾಗಿದೆ.

ವೇದಶಾಸ್ತ್ರಾಗಮ ಪುರಾಣಂಗಳೆಂಬುವ
ಕೊಟ್ಟಣವ ಕುಟ್ಟತ್ತಾ ನುಚ್ಚುತೌಡು ಕಾಣೆ ಭೋ
ಅವ ಕುಟ್ಟಲೇಕೆ?
ಅತ್ತಲಿತ್ತ ಹರಿವ ಮನದ, ಶಿರವನರಿಯಬಲ್ಲಡೆ
ಬಿಚ್ಚ ಬರಿಯ ಬಯಲು ಚನ್ನಮಲ್ಲಿಕಾರ್ಜುನ ॥[9]

ಅಕ್ಕಮಹಾದೇವಿ ಅಸಮಾನತೆಯ ನೆಲೆಯಿಂದ ಅನಿರ್ಭವಿಸುವ ವೇದಶಾಸ್ತ್ರಪುರಾಣ ವೆಂಬ ವರ್ಣಾಶ್ರಮ ವ್ಯವಸ್ಥೆಯನ್ನು ಅವೈಜ್ಞಾನಿಕ ದೃಷ್ಟಿಯಿಂದ ನೋಡುತ್ತಾಳೆ. ಭಾರತೀಯ ಪರಂಪರೆಯಲ್ಲಿ, ವೇದಶಾಸ್ತ್ರಕ್ಕೆ ಉನ್ನತ ಸ್ಥಾನವಿದೆ. ಅಂತಹ ವೇದ ಶಾಸ್ತ್ರ ಪುರಾಣಗಳನ್ನು ಅಕ್ಕಮ ಹಾದೇವಿ, ತಿರಸ್ಕರಿಸುವ ಸಾಹಸವನ್ನು ಮಾಡಿದ್ದಾಳೆ.

ತಮ್ಮ ಮೇಲರಿಮೆಯಿಂದ ಹಂತ ಹಂತವಾಗಿ, ಇತರರನ್ನು ಕೀಳರಿಮೆಯಲ್ಲಿ ಬಳಲುವಂತೆ ಮಾಡುವ ಶ್ರೇಣೀಕರಣ ವ್ಯವಸ್ಥೆಯಲ್ಲಿ ಶೋಷಣೆಗೆ ಸಾಕಷ್ಟು ಅವಕಾಶವಿದೆ. ಆ ಕಾರಣ ಅಂತಹ ವ್ಯವಸ್ಥೆಯನ್ನು ಮುರಿಯುವ ಆಕೆಯಲ್ಲಿನ ಶಕ್ತಿ ಸ್ಫುಟವಾಗಿ ವ್ಯಕ್ತವಾಗಿದೆ.

ತೀರ್ಥಕ್ಷೇತ್ರದ ಬಗ್ಗೆ ಅಕ್ಕನ ಪ್ರತಿಕ್ರಿಯೆ, ಅವಳ ಪೂರ್ಣ ದೃಷ್ಟಿಯನ್ನು ದರ್ಶಿಸುತ್ತದೆ.

ಶಿವಭಕ್ತನ ಮನೆಯಂಗಳ
ವಾರಾಣಾಸಿ ಎಂಬುದು ಹುಸಿಯೇ?
ಶಿವಭಕ್ತನ ಮನೆಯಂಗಳದಲ್ಲಿ
ಅಷ್ಟಷಷ್ಟಿ ತೀರ್ಥಂಗಳು ನೆಲಸಿಪ್ಪವಾಗಿ
ಸುತ್ತಿಬರಲು ಶ್ರೀಶೈಲ, ಕೆಲಬಲದಲ್ಲಿ ಕೇದಾರ

ಅಲ್ಲಿಂದ ಹೊರಗೆ ಶ್ರೀವಾರಣಾಸಿ
ವಿರಕ್ತಿಲೆದೆಯಾಗಿ, ಭಕ್ತಿ ಮೊಳೆಯಾಗಿ
ಎನ್ನದೇವ ಚನ್ನಮಲ್ಲಿಕಾರ್ಜುನ
ನಿಮ್ಮ ಭಕ್ತನ ಮನೆಯಂಗಳ ವಾರಾಣಾಸಿಯಿಂದಧಿಕ ನೋಡ॥[10]

ವಚನಕಾರರು ಪವಿತ್ರ ಅಥವಾ ಅಪವಿತ್ರವೆಂಬ ಭಾವೆಯಿಂದ ಲೋಕವನ್ನು ಮುಕ್ತಗೊಳಿಸಿ, ಲೋಕವನ್ನು ನಿಯಂತ್ರಿಸುವ ಇಷ್ಟಲಿಂಗ ಚೈತನ್ಯವನ್ನು ಪ್ರತಿಷ್ಠಾಪಿಸಿದರು. ಬಹುದೇವತಾರಾಧನೆ, ಸ್ವರ್ಗ-ನರಕಗಳ ಕಲ್ಪನೆಗಳನ್ನು, ತೀರ್ಥಕ್ಷೇತ್ರ ಪ್ರವಾಸ ಕೈಗೊಳ್ಳುವ ವಿಚಾರಗಳನ್ನು ನಿರಾಕರಿಸಿ, ಮಾನವನ ಬೆಳವಣಿಗೆಗೆ ಒತ್ತುಕೊಟ್ಟು ಹೊಸ ಬಗೆಯ ವಿವರಣೆ ಹಾಗೂ ವಿಶ್ಲೇಷಣೆಯನ್ನು ನೀಡಿದರು. ಅಕ್ಕಮಹಾದೇವಿಯು ಲೋಕ ಹಾಗೂ ದೈವತ್ವವನ್ನು ಹೊಸ ದೃಷ್ಟಿಯಿಂದ ನೋಡುವಳು. ಧರ್ಮದ ಹೆಸರಿನಲ್ಲಿ ಮುಕ್ತಿಯ ಸಾಧಿಸಲು ತೀರ್ಥಯಾತ್ರೆಯ ಅವಲಂಬನೆಯನ್ನು ಉಪೇಕ್ಷಿಸಿ, ಲಿಂಗವೇ ಶ್ರೇಷ್ಠವೆಂದು ಲೋಕ ವ್ಯಾಪಾರದೆಡೆಗೆ ವಿರಕ್ತಿ ಹೊಂದುವುದು ಭಕ್ತನೆನಿಸಿದವನ ಕರ್ತವ್ಯವೆಂದಿರುವುದನ್ನು ಅರಿಯಬಹುದಾಗಿದೆ.

ಶರಣರ ಧಾರ್ಮಿಕ ಮೌಲ್ಯಗಳು ಗುರುಸೇವೆ, ಲಿಂಗಮ ಪೂಜೆ - ಜಂಗಮ ದಾಸೋಹವೆಂದು, ಇದು ಧಾರ್ಮಿಕ ಜೀವನಕ್ಕೆ ಸಮೃದ್ಧಿಯನ್ನು ತರುತ್ತವೆಂದು ವಚನಕಾರರು ಅಭಿಪ್ರಾಯಪಟ್ಟು ಇವುಗಳನ್ನು ಸತ್ಯ ಶುದ್ಧತೆಯಿಂದ ಆಚರಣೆ ಮಾಡಿದರೆ, ಲಿಂಗಾಂಗ ಸಾಮರಸ್ಯವನ್ನು ಪಡೆಯಬಹುದೆನ್ನುತ್ತಾರೆ.

ಈ ಬಗೆಯ ನಿಲುವನ್ನೇ ಅಕ್ಕಮಹಾದೇವಿ ತಳೆದು ತನ್ನದೇ ಆದ ಅನುಭವ ಹಾಗೂ ಬಯಕೆಗಳನ್ನು ಒಳಗೊಂಡು ಹೇಳುವ ಮಾತುಗಳನ್ನಿಲ್ಲಿ ಗಮನಿಸಬಹುದು.

ಅರಿವು ಸಾಧ್ಯವಾಯಿತೆಂದು
ಗುರು-ಲಿಂಗ-ಜಂಗಮವ ಬಿಡಬಹುದೇ?
ಸಂದು ಸಂಶಯವಳಿದ, ಖಂಡಜ್ಞಾನವಾಯಿತೆಂದು
ಪರಧನ, ಪರಸ್ತ್ರೀಗಳುಪ ಬಹುದೇ?
"ಯತ್ರ ಜೀವಸ್ತತ್ರ ಶಿವ," ಎಂಬು ಅಭಿನ್ನಜ್ಞಾನವಾಯಿತ್ತೆಂದು
ಶುನಕು-ಸೂಕರ -ಕುಕ್ಕುಟ, ಮಾರ್ಜಾಲಂಗಳಕೂಡಿ
ಭುಂಜಿಸಬಹುದೆ?
ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು
ಸುಜ್ಞಾನ-ಸತ್ಕ್ರಿಯಾ-ಸುನೀತಿ-ಸುಮಾರ್ಗದಲ್ಲಿ ವರ್ತಿಸುವುದು
ಹೀಂಗಲ್ಲದೆ ಜ್ಞಾನವಾಯಿತ್ತೆಂದು
ತನ್ನ ಮನಕ್ಕೆ ಬಂದ ಹಾಂಗೆ ಮೀರಿ ನುಡಿದು ನಡೆದೊಡೆ
ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೆ ಚೆನ್ನಮಲ್ಲಿಕಾರ್ಜುನಯ್ಯಾ॥[11]

ಅರಿವು, ಜ್ಞಾನ ಪ್ರಾಪ್ತವಾದ ಮಾತ್ರಕ್ಕೆ ಶಿವನನ್ನು - ಗುರು - ಜಂಗಮರನ್ನು ತೊರೆಯಬಹುದೇ? ಪರಧನ- ಪರಸ್ತ್ರೀಯರೆಡೆಗೆ ಹೋಗಬಹುದೇ? ಎಂದು ಅಕ್ಕ ಪ್ರಶ್ನಿಸುತ್ತಾ ಹಾಗೆ ನಡೆದರೆ ನಾಯಿ, ಹಂದಿ, ಕೋಳಿ, ಬೆಕ್ಕುಗಳೆಂಬ ಅರಿಷಡ್ವರ್ಗಗಳ ಕೂಡಿ ಬಾಳು ನಡೆಸಿದಂತೆ ಎಂದು ಅದಕ್ಕಿಂತ ಲಜ್ಜೆಗೆಟ್ಟ ಬಾಳು ಮತ್ತೊಂದಿಲ್ಲವೆಂದಿದ್ದಾಳೆ. ಹೀಗೆ ಕೀಳು ಪ್ರಾಣಿಗಳು ತಮ್ಮನ್ನು ನಿಯಂತ್ರಿಸುವಂತಾದರೆ, ಅಪಾಯ ಖಂಡಿತವೆಂದು ಸನ್ಮಾರ್ಗದಲ್ಲಿ ಸಾಗಬೇಕೆನ್ನುವಳು. ಈ ಸನ್ಮಾರ್ಗವನ್ನು ಬಿಟ್ಟು ತನ್ನ ಮನಬಂದಂತೆ, ದುರ್ನಡತೆಯಿಂದ ವರ್ತಿಸಿದರೆ, ನಾಯಿ ಜನ್ಮದಲ್ಲಿ ಹುಟ್ಟುವರೆಂದು ಅಕ್ಕಮಹಾದೇವಿ ಅನ್ಯಮಾರ್ಗದಲ್ಲಿ ನಡೆಯಲೆತ್ನಿಸುವರಿಗೆ ಮುನ್ನೆಚ್ಚರಿಸಿದ್ದಾಳೆ.

ಅಕ್ಕನ ವಿಶೇಷವೆಂದರೆ, ರೂಢಿಗತ, ನಂಬಿಕೆಗಳನ್ನು ಧಿಕ್ಕರಿಸುವುದು. ಹೀಗೆ ಧಿಕ್ಕರಿಸುವ ಸಂದರ್ಭದಲ್ಲೇ ಸಮಾಜದ ಹಿಂಸಾತ್ಮಕ ಚೌಕಟ್ಟನ್ನು ವಿಮರ್ಶಿಸಿ ಅಲ್ಲಿನ ಅನ್ಯಾಯಗಳನ್ನು ವಿರೋಧಿಸುವವಳಾಗಿ ಕಂಡುಬರುತ್ತಾಳೆ. ಸಮಾಜದಲ್ಲಿ ಧರ್ಮದ ಹೆಸರಿನಲ್ಲಿ ಜರಗುವ ಅಸಹಜ ಹಾಗೂ ಅಸಂಗತ ನಡವಳಿಕೆಗಳನ್ನು ಧಿಕ್ಕರಿಸುವ ಶಕ್ತಿ ಉಳ್ಳವಳಾಗಿ ಕಾಣುತ್ತಾಳೆ.

### ಅಕ್ಕಮ್ಮ

ಅಕ್ಕಮ್ಮ ಧರ್ಮ ಜಾಗೃತಿಯನ್ನು ಮೂಡಿಸುವಲ್ಲಿನ ಆಚಾರ - ವಿಚಾರಗಳನ್ನು ಸೂಕ್ಷ್ಮವಾಗಿ ವಿವರಿಸುತ್ತಾಳೆ. ಗುಣವಂತಿಕೆಯ ವ್ರತವಿವೇಚನೆ, ಇವಳಲ್ಲಿ ಪ್ರಧಾನವಾಗಿ ವಿಮರ್ಶೆಗೆ ಒಳಗಾಗುತ್ತದೆ.

ಏರಿಯ ಕೆಳಗೆ ಬಿದ್ದ ನೀರು ಪೂರ್ವದ ತಟಾಕ ಏರ ಬಲ್ಲುದೇ?
ವ್ರತಾಚಾರವ ಮೀರಿ ಕೆಟ್ಟ ಅನಾಚಾರಿ ಸದ್ಭಕ್ತರ ಕೂಡಬಲ್ಲದೆ?
ದೇವಾಲಯದಲ್ಲಿ ಸತ್ತೆಡೆ, ಸಂಪ್ರೋಕ್ಷಣವಲ್ಲದೆ,
ದೇವರು ಸತ್ತಲ್ಲಿ ಉಂಟೇ, ಸಂಪ್ರೋಕ್ಷಣೆ?
ಅಂಗದಲ್ಲಿ ಮರವೆಗೆ ಹಿಂಗುವ ಠಾವಲ್ಲದೆ,
ಮನವರಿದು ತಾಕು ಸೋಂಕಿಗೆ ಹೆದರದೆ ಕೂಡಿದ
ದುರ್ಗುಣಕ್ಕುಂಟೆ ಪ್ರಾಯಶ್ಚಿತ್ತ?
ಇಂತಿವ ಕಂಡಲ್ಲಿ ಗುರುವಾದಡೂ ಬಿಡಬೇಕು,
ಲಿಂಗವಾದಡೂ ಬಿಡಬೇಕು, ಜಂಗವಾದಡೂ ಬಿಡಬೇಕು
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗವಾಡೂ ಬಿಡಬೇಕು॥[12]

ನೀತಿ ಶೀಲ ನಡವಳಿಕೆಯನ್ನು ವ್ರತಾಚಾರವೆಂದು ಪರಿಗಣಿಸುವ ಅಕ್ಕಮ್ಮ ದುರ್ಗುಣದಿಂದ ಬಾಳುವಾತನಿಗೆ ಪ್ರಾಯಶ್ಚಿತ್ತವಿಲ್ಲ, ವ್ರತಾಚಾರ ನಿರತನಾದವನಿಗೆ, ಸರ್ವದೋಷವೂ ನಾಶವಾಗುತ್ತದೆ ಎನ್ನುತ್ತಾಳೆ. ತಪ್ಪೆಂದು ತಿಳಿದು ನಿರ್ಭಯವಾಗಿ ಭ್ರಷ್ಟರಂತೆ ಅಂಗಕ್ಕೆ ಮಾರುಹೋಗಿ, ಮೆರೆಯುವ ಅನಾಚರಿಗಳನ್ನು ನಿರ್ಭಯವಾಗಿ ಟೀಕಿಸುತ್ತಾಳೆ.

ಆಚಾರ ನಿಷ್ಠೆಯಿಲ್ಲದಿದ್ದರೆ, ಪರಮಾತ್ಮನಿಗೂ ಬಹಿಷ್ಕಾರ ಹಾಕುವೆನೆನ್ನುವ ಆಚಾರವಂತೆ ಅಕ್ಕಮ್ಮ. ಇವಳದು ನೈಜ ಬದುಕಿಗೆ ಒಲಿದ ಮನಸ್ಸು. ಅನೈತಿಕ ಕೆಲಸ ಸರ್ವರಿಗೂ ನಿಷೇಧವೆನ್ನು

ತ್ತಾಳೆ. ಜೊತೆಗೆ 'ಧರ್ಮಜ್ಞ'ನೆನಿಸಿದವನು ಸದಾಚಾರದಿಂದ ನಡೆಯಬೇಕೆಂದು, ಅದು ಬಿಟ್ಟು ಮನದ ದೌರ್ಬಲ್ಯದಿಂದ ಅನಾಚಾರವೆಸಗುವವರ ಕಂಡು ತೀವ್ರವಾಗಿ ವಿರೋಧಿಸಿ ಅನಾಚಾರ ದಿಂದ ಮನುಷ್ಯ ಅಧಃಪತನ ಹೊಂದುವನೆಂದು ಪರಿಣಾಮಕಾರಿಯಾಗಿ ಹೇಳಿರುವುದನ್ನಿಲ್ಲಿ ಕಾಣಬಹುದು.

'ಧರ್ಮಜ್ಞ'- ನೆನಿಸಿದವನು. ಗುರುಮುಖೇನ ವಿಧ್ಯುಕ್ತವಾದ ಸಂಸ್ಕಾರವನ್ನು ಪಡೆದು 'ಸದಾಚಾರ' ದಿಂದ ನಡೆದುಕೊಳ್ಳಬೇಕು. ಸದಾಚಾರ, ಒಳ್ಳೆಯ ನಡೆ, ಆಚರಣೆಗಳನ್ನು ಹೊಂದಿ, ಪ್ರಾಮಾಣಿಕವಾಗಿದ್ದುಕೊಂಡು, ಸಕಲ ಪ್ರಾಣಿಗಳ ಹಿತವನ್ನು ಬಯಸುವುದು. ಸತ್ಯಶುದ್ಧ ಕಾಯ ವನ್ನು ಕೈಗೊಳ್ಳುವುದು. ಪಂಚಾಚಾರವನ್ನು ಅನುಸರಿಸುವುದು 'ಸದಾಚಾರ' ವೆನಿಸುತ್ತದೆ.[13] ವೈಭ ವದಿಂದ ಸ್ವಾರ್ಥಸಾಧನೆಗೆ ಮಹತ್ವ ನೀಡುವರ ಕಂಡು ಅಕ್ಕಮ್ಮ ಸರ್ವರೂ 'ಧರ್ಮಜ್ಞ'ರಾಗಬೇ ಕೆಂದು ಬಯಸುತ್ತಾಳೆ.

> ಕೆರೆ ಪೂದೋಟ ಅರವಟ್ಟಿಗೆ ಬಾವಿ ವಿವಾಹ
> ಮುಂತಾದ ಧರ್ಮಂಗಳ, ಕಟ್ಟಿಹೆವೆಂದು
> ನೇಮದಿಂದ ತಿರುಗುವ, ಶೀಲ ಅದಾರಿಗೆ ಯೋಗ್ಯ?
> ಸರಿಹುದುಗಿದ ಸೂಳೆ, ಸೀರೆಯನುಟ್ಟಂತೆ,
> ಅದಾರಿಗೆ, ಸುಖಃ ದುಃಖವೆಂಬುದ ನೀನೆ ಅರಿ
> ಸರಿಹುದುಗಿದ ಧರ್ಮವುಂಟೆ?
> ಅರಿಕೆಯ ಒಡವೆಯ ಊರೆಲ್ಲಕ್ಕೆ ತಂದಿಕ್ಕಿ,
> ನಾ ಮಾಡಿದೆನೆಂದೆಡೆ ಇದಾರು ಮೆಚ್ಚುವರು?
> ಆ ಮಾಟವನಾರಯಲಿಲ್ಲ, ಅದು ಸ್ವಕಾರ್ಯಕ್ಕೆ ಏರಿದ ಪಥ
> ಇಂತೀ ವ್ರತನೇಮ, ಶೀಲವನ್ನರಿಯಬೇಕು
> ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ
> ಧರ್ಮಜ್ಞನಾಗಿ, ವ್ರತವನಂಗೀಕರಿಸಬೇಕು.[14]

ಆಚಾರವೆಂಬುದ ಪ್ರಾಣವಾಗಿರುವ ಅಕ್ಕಮ್ಮನಿಗೆ ಧರ್ಮಬಾಹಿರನ ಬಗೆಗೆ ತೀವ್ರವಾದ ವಿರೋಧವಿದೆ.ಧರ್ಮವೆಂಬುದು ಅಂತರಂಗ ಕ್ರಿಯೆಯಾಗಬೇಕೇ ವಿನಹಃ ಧರ್ಮಕಾರ್ಯವೆಸ ಗಿದೆ ಎಂದು ಮೆರೆದರೆ ಬಂದ ಫಲವಾದರೂ ಏನೆಂದು ನಿರ್ಭಿತಿಯಿಂದ ಅಕ್ಕಮ್ಮ ಪ್ರಶ್ನಿಸುತ್ತಾಳೆ. ಸ್ವಕಾರ್ಯಕ್ಕೆ ಹೊರತಾಗಿ ಲೋಕಕಲ್ಯಾಣದ ಗುರಿಯುಳ್ಳವನಾಗುವ ಮೂಲಕ ಧರ್ಮಜ್ಞನೆನಿಸ ಬೇಕೆಂದು ಸ್ಪಷ್ಟವಾಗಿ ನುಡಿಯುತ್ತಾಳೆ.

ಕೆಳವರ್ಗದ ಮಹಿಳೆಯರಲ್ಲಿ ಉಂಟಾದ ಈ ಬಗೆಯ ಧಾರ್ಮಿಕ ನೆಲೆಯನ್ನು ನಿರಾಕರಿಸುವ ವಿಚಾರವಂತಿಕೆ ಅಸಾಮಾನ್ಯವಾದುದಾಗಿದೆ.

**ಅಮುಗೆರಾಯಮ್ಮ**

ನಿಷ್ಠುರವಾದಿಯಾದ ರಾಯಮ್ಮನಿಗೆ ಧರ್ಮದ ಮೂಲ ಉದ್ದೇಶ ಸಾಮಾಜದ ಶುದ್ಧೀಕರಣವಾಗಿದೆ. ಸಾಮಾಜಿಕ ಬದುಕಿನಲ್ಲಿ ಏಕ ಸೂತ್ರತೆಯನ್ನು ತರಲು ಭಿನ್ನವಾದ ಅಪೂರ್ವ ಮಾದರಿಯೊಂದನ್ನು ಅನುಸರಿಸಬೇಕೆನ್ನುತ್ತಾಳೆ.

ಅಂಗಕ್ಕಾಚಾರ, ಮನಕ್ಕೆ ಜ್ಞಾನ ಸಮರಸಾದ್ವೈತವಾದ ಮತ್ತೆ
ಪುನರಪಿ ಪುನರ್ದೀಕ್ಷೆಯುಂಟೆ?
ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಉಂಟೆ ಕೋಲು?
ಭವಿಗೆ ಮೇಲು ವ್ರತ ಪುನರ್ದೀಕ್ಷೆಯಲ್ಲದೆ ಭಕ್ತರಿಗುಂಟೆ?
ವ್ರತತಪ್ಪಿ ಅನುಗ್ರಹವಿಡಿದ ನರಕಿಗಳಿಗೆ
ಮುಕ್ತಿ ಇಲ್ಲ ಎಂದೆ ಅಮುಗೇಶ್ವರ ಲಿಂಗದಲ್ಲಿ॥[15]

ಆಚಾರ ಮತ್ತು ಜ್ಞಾನದ ಸಾಮರಸ್ಯದೊಂದಿಗೆ ದೇಹ ಮನಸ್ಸುಗಳ ನಿರೀಕ್ಷಣೆಯೂ ಏಕಮುಖಿಯಾಗಿದ್ದಲ್ಲಿ ಪುನರ್ದೀಕ್ಷೆಯ ಅಗತ್ಯಬಾರದೆಂದು ಭವಿಯನ್ನು ಕಂಡು ಕೋಪಗೊಂಡು ಮುಕ್ತಿಯೆಂಬುದಿಲ್ಲವೆನ್ನುತ್ತಾಳೆ. ಆಚರಣೆಯಲ್ಲಿ ವ್ರತ ವಿಲ್ಲದೆ ಶಿವನ ಅನುಗ್ರಹವ ಬಯಸುವವರನ್ನು ಕಟುವಾಗಿ ನಿಂದಿಸುವಲ್ಲಿಯೆ ಸದಾಚಾರದಿಂದ ಜ್ಞಾನಹೊಂದಿದ ಭಕ್ತನನ್ನು ಗೌರವದಿಂದ ಕಾಣುತ್ತಾಳೆ.

ಸ್ವಾರ್ಥಸಾಧನೆಯಿಂದ ವೇಷಧರಿಸಿ ತಿರುಗುವರ 'ಗಾವಿಲ 'ರ ಮುಖವ ನೋಡಲಾಗದು ಎಂದು ಅತ್ಯಂತ ಕಟುವಾಗಿ ಟೀಕಿಸುತ್ತಾಳೆ. ವೈಚಾರಿಕವಾಗಿ ವಿಶ್ಲೇಷಿಸುವ ರಾಯಮ್ಮನಿಗೆ ಧರ್ಮದ ಹೆಸರಿನಲ್ಲಿ ವಂಚನೆ ಮಾಡಿ ಆದರ್ಶವಿಲ್ಲದೆ ಬಾಳುವವರ ಬಗೆಗೆ ಆಕ್ರೋಶವಿರುವುದನ್ನು ಈ ಕೆಳಕಂಡ ವಚನದಲ್ಲಿ ಗುರುತಿಸಬಹುದು.

ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ?
ಆಡಿನ ಮರಿ ಆನೆಯಾಗಬಲ್ಲುದೆ?
ಸೀಳು ನಾಯಿ ಸಿಂಹದ ಮರಿಯಾಗಬಲ್ಲುದೆ?
ಅರಿವು ಆಚಾರ ಸಮ್ಯಜ್ಞಾನವನರಿಯದೆ
ನಾಮವ ಹೊತ್ತುಕೊಂಡು, ತಿರುಗುವ ಗಾವಿಲರ
ಮುಖವ ನೋಡಲಾಗದು ಅಮುಗೇಶ್ವರಾ ॥[16]

**ಬಸವ ಧರ್ಮವು ಆಚರಣೆಯಾಗಿ ಅಭಿವ್ಯಕ್ತಗೊಂಡಿರುವ ಸ್ವರೂಪ**

ಗಂಗಾಂಬಿಕೆ, ನೀಲಾಂಬಿಕೆ, ನಾಗಲಾಂಬಿಕೆಯರಲ್ಲಿ ಬಸವಣ್ಣನ ಸ್ತುತಿಪರವಾದ ವಚನಗಳನ್ನು ಹೇರಳವಾಗಿ ಕಾಣಬಹುದು.

ಬಸವಣ್ಣನವರು ನಡೆಸಿದ ಧಾರ್ಮಿಕ, ಸಾಮಾಜಿಕ ಸಾಧನೆಗಳಿಗೆ, ಆಧ್ಯಾತ್ಮಿಕ ಚಿಂತನೆಗೆ ಮಾರುಹೋದ ಇವರಿಗೆ, ಬಸವಣ್ಣನ ಆದರ್ಶವೇ ಧರ್ಮವಾಗಿ ಪರಿಣಮಿಸಿದಂತೆ

ತೋರುತ್ತದೆ. ವಚನ ಚಳುವಳಿಯ ಧಾರ್ಮಿಕ ಸಂದರ್ಭದಲ್ಲಿ ಬಸವಣ್ಣನಿಗಿದ್ದ ಪ್ರಾಮುಖ್ಯತೆಯನ್ನಿಲ್ಲಿಗುರುತಿಸಬಹುದು.

ಅಕ್ಕಮಹಾದೇವಿಯಲ್ಲಿ ಲೌಕಿಕ ಪತಿಯ ನಿರಾಕರಣೆ ಹಾಗು ಅಲೌಕಿಕಪತಿಯ ಸ್ವೀಕೃತಿಯನ್ನು ಕಂಡರೆ, ಗಂಗಾಬಿಕೆ, ನೀಲಾಂಬಿಕೆಯರಿಗೆ ತಮ್ಮ ಲೌಕಿಕ ಪತಿಯೇ ಮಹಾಪುರಷನಾಗಿ ಕಂಡುಬರುತ್ತಾನೆ. ಬಸವ ಭಕ್ತಿ ಬಸವ ನಿಷ್ಠೆಯೇ ಸತಿಯ ಧರ್ಮವಾಗಿ ಪರಿಣಮಿಸಿದೆ.

ನೀಲಮ್ಮ ಹೆಣ್ತನಕ್ಕಂಟಿದ ಎಲ್ಲಾ ಮಿತಿಗಳನ್ನೂ ಮೀರಿ, ಜೈವಿಕ ನೆಲೆಯ ನೆಲೆಗಟ್ಟನ್ನು ತೊರೆದು ತಾತ್ವಿಕ ಆಲೋಚನೆಯಿಂದ ದೇಹದ ಮಮಕಾರವು ಅಳಿಯುವುದೆಂದು, ಬಸವನ ಸಂಗಮಾತ್ರದಿಂದ ಸುಖಿಯಾದೆನು ಎನ್ನುತ್ತಾಳೆ.

ಕಾಮಿಯಾನಾಗಿ ಕಾಮದ ಹಂಗಹರಿದೆನು ಬಸವಾ
ಕಾಮನಿಃಕಾಮವಾಗಿ ಬಸವನ ಹೆಸರಲ್ಲಿ ಬಲವಂತರ ಕಂಡೆ
ಬಲವಂತರ ಬಲುಹ ಕಂಡು ಬಲುಹನಳಿದು
ಬಸವನಲ್ಲಿ ನಿರಾಲಂಬಿಯಾದೆನಾನು
ನಿರಾಕುಳದ ಹಂಗಹರಿದು
ನಾನು ಸುಖಿಯಾದೆನಯ್ಯಾ, ಸಂಗಯ್ಯ ಬಸವನಲ್ಲಿ॥[17]

ಹನ್ನೆರಡನೇ ಶತಮಾನದ ಧಾರ್ಮಿಕ ಆಲೋಚನೆಗಳು, ಬಸವಣ್ಣನವರ ತಾತ್ವಿಕ ಆಲೋಚನೆಯನ್ನು, ಆದರ್ಶವನ್ನು ಒಪ್ಪಿದ ಕಾರಣ, ಬಸವಧರ್ಮವೆಂಬ, ಮುಖವಾಣಿಯ, ಮುಖೇನ, ಶಿವ ಶರಣೆಯರು ತಮ್ಮ ಅಭಿಪ್ರಾಯವನ್ನು ವಿವರಿಸಿರುವಂತೆ ತೋರುತ್ತದೆ.

**ಮುಕ್ತಾಯಕ್ಕ**

ಕ್ರಿಯಾಚರಣೆಯಲ್ಲಿ ಅಥವಾ ಕೈಗೊಳ್ಳುವ ಕಾಯಕದಲ್ಲಿ ಆಚಾರ -ವಿಚಾರಗಳಿರಬೇಕೆನ್ನುವ ಮುಕ್ತಾಯಕ್ಕ ತನ್ನ ತಿಳುವಳಿಕೆಯಿಂದ ತನ್ನ ಅಣ್ಣ ಅಜಗಣ್ಣನ ಆದರ್ಶ ವ್ಯಕ್ತಿತ್ವವನ್ನು ಮುಂದೊಡ್ಡಿ ಕಾಲಹರಣ ಮಾಡುವರನ್ನು ವಿಡಂಬಿಸುತ್ತಾಳೆ.

ಸುಮ್ಮನೇಕೆ ದಿನಕಳೆವಿರಿ, ಸಮ್ಮನೇಕೆ ಹೊತ್ತುಗಳೆವಿರಿ?
ಸುಮ್ಮನೇಕೆ ಹೊತ್ತಗಳೆವಿರಿ ಸ್ವಾಮಿಗಳಿರಾ?
ಮಾಡಬನ್ನಿ ದಿನ ಶಿವರಾತ್ರಿಯ, ಕೇಳಬನ್ನಿ ಶಿವಾನುಭವವ
ನೋಡಬನ್ನಿ ಅಜಗಣ್ಣನಿರುವ ಬಸವಣ್ಣ ತಂದೆ॥[18]

ಮುಕ್ತಾಯಕ್ಕ ಬದುಕಿನಲ್ಲಿನ 'ಕಾಲ'ದ ಮಹತ್ವವನ್ನು ಅರಿತು ಅಲ್ಲಿ ತಾತ್ವಿಕ ಆಲೋಚನೆಯನ್ನು ಅಭಿವ್ಯಕ್ತಿಸುವ ಚಿಂತನಶೀಲ ಮಹಿಳೆಯಾಗಿದ್ದಾಳೆ. 'ಹೊತ್ತು' ಕಳೆಯುವುದು ಶರಣದ ಧರ್ಮವಲ್ಲವೆಂದು ಸೂಕ್ಷ್ಮವಾಗಿಯೇ ಕಾಯಕವೆಂಬುದು ಪ್ರತಿಯೊಬ್ಬರ ಜೀವನದ ಗುರಿಯಾಗಬೇಕೆನ್ನುತ್ತಾಳೆ.

ತಾತ್ವಿಕ ಚಿಂತಕಳಾದ ಮುಕ್ತಾಯಕ್ಕ ತನ್ನ ಅಣ್ಣ ಅಜಗಣ್ಣನಂತೆ ಶಿವಯೋಗಸಾಧನೆ, ಶಿವ ಭಕ್ತಿ ಸರ್ವರ ಆದರ್ಶವಾಗಬೇಕೆನ್ನುತ್ತಾಳೆ. ಮುಕ್ತಾಯಕ್ಕ ತನ್ನ ನೆಚ್ಚಿನ ಅಣ್ಣನ ಕುರಿತು ಹೇಳುವ ಸಂದರ್ಭದಲ್ಲಿಯೇ ಹೀಗೆ ಕಾಲ ಹಾಗೂ ಭಕ್ತಿಯ ವಿವರಗಳನ್ನು ಪ್ರಧಾನ ಅಂಶಗಳನ್ನಾಗಿ ಪರಿಗಣಿಸಿರುವುದನ್ನು ಗುರುತಿಸಬಹುದು.

ವಚನಕಾರರಲ್ಲಿ 'ಶಿವಯೋಗ'ವೆಂದರೆ ಸುಳ್ಳು, ಹಿಂಸೆ, ಪರದ್ರವ್ಯ, ಪರಸ್ತ್ರೀ, ಪರನಿಂದೆಗಳನ್ನು ತ್ಯಜಿಸುವುದು. ಸರ್ವೇಂದ್ರಿಯಗಳನ್ನೂ ಅಂಕೆಯಲ್ಲಿಟ್ಟುಕೊಂಡು ಧರ್ಮಮಾರ್ಗದಲ್ಲಿರುವುದು.[19] ಎನ್ನುವುದೇ ಆಗಿದೆ.

### ಸತ್ಯಕ್ಕ

ಶರಣರ ಪ್ರಭಾವದಿಂದ ಸತ್ಯಕ್ಕ ಏಕದೇವೋಪಾಸನೆಯನ್ನು ಪ್ರತಿಪಾದಿಸುವ ಮಟ್ಟಿಗೆ ಬೌದ್ಧಿಕವಾಗಿ ಬೆಳೆದಿರುವುದನ್ನು ಕಾಣಬಹುದು. ಆಚಾರ ಶುದ್ಧತೆಯಿಂದ ಮಾಡುವ ನೇಮ ಶಿವನಿಗೊಪ್ಪುತ್ತದೆ ಎಂದು ಶಿವನೊಬ್ಬನೇ ಶ್ರೇಷ್ಠನೆಂದು ದೃಢವಾಗಿ ನಂಬಿ ನಡೆದಂತೆ ತೋರುತ್ತದೆ.

ತಲೆಯ ಮೇಲೆ ತಲೆಯುಂಟೆ? ಹಣೆಯಲ್ಲಿ ಕಣ್ಣುಂಟೆ?
ಗಳದಲ್ಲಿ ವಿಷವುಂಟೆ? ದೇವರೆಂಬವರಿಗೆಂಟೊಡಲುಂಟೆ?
ತಂದೆಯಿಲ್ಲದವರುಂಟೆ? ತಾಯಿಯಿಲ್ಲದವರುಂಟೆ?
ಎಲವೊ, ನಿಮ್ಮ ಹಣೆಯಲ್ಲಿ ನೇಸರು ಮೂಡದೆ?
ಶಂಭುಜಕ್ಕೇಶ್ವರನಲ್ಲದೆ ಉಳಿದ ದೈವಂಗಳುಂಟೆ?[20]

ಯಾವುದು ಈ ಲೋಕದಲ್ಲಿ ಸಾಧ್ಯವಿಲ್ಲವೋ, ಆ ಅಸಾಧ್ಯವಾದದನ್ನು ಸಾಧ್ಯವೇ? ಎಂದು ಪ್ರಶ್ನಿಸುತ್ತಾ ತೋರ್ಪಡಿಕೆಯ ಆಡಂಬರದ ಭಕ್ತಿಯನ್ನು ವಿರೋಧಿಸುತಾಳೆ, ತಂದೆ-ತಾಯಿಯರಿಲ್ಲದ ಮಕ್ಕಳು ಹೇಗೆ ಈ ಜಗತ್ತಿನಲ್ಲಿ ಸಾಧ್ಯವಿಲ್ಲವೋ ಹಾಗೆ ಶರಣರಿಗೆ ಶಿವನೇ ನಿಜವಾದ ದೇವನು. ಆ ದೇವನನ್ನು ಬಿಟ್ಟು ಅನ್ಯ ದೈವ ಎನ್ನುವಲ್ಲಿ ತಲೆಯಮೇಲೆ ತಲೆಯುಂಟೇ? ಹಣೆಯಲ್ಲಿ ಕಣ್ಣುಂಟೇ? ಎಂದು ಸತ್ಯಕ್ಕ ಪ್ರಶ್ನಿಸುತ್ತಾಳೆ. ಶರಣರು ಶಿವನಲ್ಲಿ ದೃಢನಂಬಿಕೆಯಿಟ್ಟು ಬೇರೆ ದೇವತೆಗಳನ್ನು ಪೂಜಿಸಬಾರದೆಂದು ಸಾರುತ್ತಾ ಬಹುದೇವತಾರಾಧನೆಗೆ ಅವಕಾಶವಿಲ್ಲವೆನ್ನುವುದನ್ನು ಇಲ್ಲಿ ವಿವರಿಸಲು ಪ್ರಯತ್ನಿಸಿದಂತಿದೆ.

ಸತ್ಯಕ್ಕ ಕಾಯಕದಿಂದಲೇ ಮುಕ್ತಿಯೆಂದರಿತು, ಪರರ ದ್ರವ್ಯಕ್ಕೆ ದೂರಾದ ಕಾಯಕ ಸಂಸ್ಕೃತಿಯನ್ನು ಬೆಂಬಲಿಸುತ್ತಾಳೆ. ಆರ್ಥಿಕವಾಗಿ ಸಬಲರಾದಾಗ ಮಾತ್ರ ಸರ್ವ ಸಮಾನತೆ ಸಾಧ್ಯವೆಂದು ಮನಗಂಡು, ಅನ್ಯರ ಒಡವೆಯಲ್ಲಿ ಆಸಕ್ತಿ ತೊರೆಯಬೇಕೆಂದಿದ್ದಾಳೆ. ಜೊತೆಗೆ ಲಂಚಕ್ಕೆ ಕೈ ಚಾಚಿದರೆ, ಭಿಕ್ಷೆ ಬೇಡಿದಂತೆಯೇ, ಎಂದು ಸಮಾಜಕ್ಕೆ ಕಂಟಕಪ್ರಾಯನಾಗಿ ನಡೆಯದಿರುವುದೇ ಮನುಜ ಧರ್ಮವಾಗಬೇಕೆಂಬ ನಿಶ್ಚಲ ನಿಲುವು ಅವಳ ವಚನಗಳ ಮೂಲಕ ಪ್ರಕಟಗೊಳ್ಳುತ್ತವೆ.

**ವಚನಕಾರ್ತಿಯರಿಗೆ ಬದುಕಿನಲ್ಲಿನ ಸನ್ಮಾರ್ಗವೇ ಧರ್ಮದ ಮಂತ್ರ :-**

'ಧರ್ಮ' ವೆಂದರೆ ವಚನಕಾರ್ತಿಯರ ದೃಷ್ಟಿಯಲ್ಲಿ ಉತ್ತಮವಾದ ಬದುಕಿನ ಆದರ್ಶಮಯ ಪ್ರಜ್ಞೆಯಾಗಿದೆ. ಜೊತೆಗೆ ಅದಕ್ಕೆ ಪೂರಕವಾದ ಪ್ರಾಮಾಣಿಕತೆ ಹಾಗೂ ಸನ್ನಡತೆಯನ್ನು ಹೊಂದುವುದಾಗಿದೆ.

ವಚನಕಾರರಿಗೆ ಮಾನವ ಜನ್ಮವೆಂಬುವುದು ಸಾಧಾರಣ ಸೃಷ್ಟಿಯಾಗಿರದೆ, ಸಮಷ್ಟ ಸೃಷ್ಟಿಯ ಒಂದು ಭಾಗದಂತೆ ಕಂಡಿದೆ. ತನ್ನ ಸೃಷ್ಟಿಯ ರಹಸ್ಯವನ್ನು ಭೇದಿಸುವ ಸಲುವಾಗಿ ಆಧ್ಯಾತ್ಮಿಕ ಮಾರ್ಗವನ್ನು ಹಿಡಿಯುವುದು ಶರಣನಿಗೆ ಅನಿವಾರ್ಯವೆಂದಿದ್ದಾರೆ. ಈ ಸಾಧನೆಗೆ ಅಂದರೆ, ಆಧ್ಯಾತ್ಮಿಕ ಮಾರ್ಗವನ್ನು ಕ್ರಮಿಸಲು ಸತ್ಯ, ನಿಷ್ಠೆ ಸೌಹಾರ್ದತೆ, ಕಾಯಕ ಹಾಗೂ ನಿರ್ಮಲ ಮನಃಸ್ಥಿತಿಯಿರಬೇಕು. ಈ ಎಲ್ಲಾ ಗುಣಗಳಿದ್ದರೆ, ಜೀವಾತ್ಮನು, ಪರಮಾತ್ಮನ ಅಂತರಂಗದಲ್ಲಿ ಸ್ಥಾನ ಪಡೆಯಲು ಸಾಧ್ಯ ಎಂಬುದನ್ನು ವಚನಕಾರ್ತಿಯರು ತಮ್ಮದೇ ಆದ ವ್ಯಕ್ತಿನಿಷ್ಠ ವಿಭಿನ್ನ ನೆಲೆಗಳಲ್ಲಿ ಪ್ರತಿಪಾದಿಸಿದ್ದಾರೆ. ಈ ನಿಟ್ಟಿನಲ್ಲಿ ಭಕ್ತಿ ಸದಾಚಾರ, ಸದ್ವರ್ತನೆ, ಮಾನವೀಯತೆ, ನೈತಿಕ ಪ್ರಜ್ಞೆಗಳ ಸ್ವೀಕೃತಿಯೂ ಜಾತೀಯತೆ, ಬಹುದೇವತಾರಾಧನೆ, ಮತೀಯ ನೀತಿಗಳ ತಿರಸ್ಕಾರವನ್ನು ಅವರ ವಚನಗಳು ನಿರ್ವಚಿಸುತ್ತವೆ.

'ಧರ್ಮ' ವೆಂಬುದನ್ನು ಬೇರೆಯವರಲ್ಲಿ ಅಥವಾ ಬೇರೆ ಯಾವುದೋ ವಸ್ತುವಿನಲ್ಲಿ ಕಾಣುವುದಲ್ಲ, ಬದಲಿಗೆ ಮೊದಲು ನಮ್ಮಲ್ಲೇ ಅಳವಡಿಸಿಕೊಂಡು ಹೊಂದಬೇಕಾದ ಪರಿಪೂರ್ಣತೆ ಎಂದು ತಿಳಿದು ವಿಶಿಷ್ಟಬಗೆಯ ಧಾರ್ಮಿಕ ಆಶಯದಿಂದ ವಚನಕಾರ್ತಿಯರು ವಚನ ರಚಿಸಿದಂತೆ ತೋರುತ್ತದೆ. ಹೀಗಿರುವಾಗ, ಕನ್ನಡದ ವಚನಕಾರ್ತಿಯರು, ವಿಶ್ವದ ಅಸಾಮಾನ್ಯ ಮನೋ ವಿಜ್ಞಾನಿಗಳಂತೆ, ಕಂಡು ಬರುವುದರಲ್ಲಿ ಅತಿಶಯೋಕ್ತಿಯಾಗಲಾರದು. ಈ ಹಿನ್ನೆಲೆಯಲ್ಲಿ ವಚನಕಾರ್ತಿಯರ ಧಾರ್ಮಿಕ ಮೌಲ್ಯ ಇಂದಿಗೂ ಪ್ರಸ್ತುತವಾಗುತ್ತದೆ.

## ಅಡಿಟಿಪ್ಪಣಿಗಳು

1. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 152
2. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 152
3. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 152
4. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 153
5. Britanica Ready Reference Encyclopedia Vol 8, Pg. 142
6. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 153
7. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-3 'ಧರ್ಮ' - ಸಂ. ರಹಮತ್ ತರೀಕೆರೆ, ಪುಟ 153
8. ವಿಶ್ವವಿಜೇತ ವಿವೇಕಾನಂದ - ಸ್ವಾಮಿ ಪುರುಷೋತ್ತಮಾನಂದ, ಪುಟ 90
9. ಅಕ್ಕನ ವಚನಗಳು -ಸಂ. ಡಾ॥ ಎಲ್. ಬಸವರಾಜು, ಪುಟ 74, ವಚನ - 107
10. ಅಕ್ಕನ ವಚನಗಳು -ಸಂ. ಡಾ॥ ಎಲ್. ಬಸವರಾಜು, ಪುಟ 94, ವಚನ - 173
11. ಅಕ್ಕನ ವಚನಗಳು -ಸಂ. ಡಾ॥ ಎಲ್. ಬಸವರಾಜು, ಪುಟ 82, ವಚನ - 137
12. ಶಿವಶರಣೆಯರ ವಚನ ಸಂಪುಟ-ಸಂ. ಡಾ॥ ವೀರಣ್ಣ ರಾಜೂರ, ಪುಟ 140, ವಚನ -26
13. ವೀರಶೈವ ಪಾರಿಭಾಷಿಕ ಪದಕೋಶ - ಸಂ. ಡಾ॥ ಎಸ್. ವಿದ್ಯಾಶಂಕರ, ಪುಟ 551
14. ಶಿವಶರಣೆಯರ ವಚನ ಸಂಪುಟ-ಸಂ. ಡಾ॥ ವೀರಣ್ಣ ರಾಜೂರ, ಪುಟ 145, ವಚನ -40
15. ಶಿವಶರಣೆಯರ ವಚನ ಸಂಪುಟ-ಸಂ. ಡಾ॥ ವೀರಣ್ಣ ರಾಜೂರ, ಪುಟ 186, ವಚನ -1
16. ಶಿವಶರಣೆಯರ ವಚನ ಸಂಪುಟ-ಸಂ. ಡಾ॥ ವೀರಣ್ಣ ರಾಜೂರ, ಪುಟ 197, ವಚನ -39
17. ಶಿವಶರಣೆಯರ ವಚನ ಸಂಪುಟ-ಸಂ. ಡಾ॥ ವೀರಣ್ಣ ರಾಜೂರ, ಪುಟ 289, ವಚನ -142

18. ಶಿವಶರಣೆಯರ ವಚನ ಸಂಪುಟ–ಸಂ. ಡಾ॥ ವೀರಣ್ಣ ರಾಜೂರ, ಪುಟ 334, ವಚನ – 35



19. ವೀರಶೈವ ಪಾರಿಭಾಷಿಕ ಪದಕೋಶ –ಸಂ. ಡಾ॥ ಎಸ್. ವಿದ್ಯಾಶಂಕರ, ಪುಟ 508,

20. ಶಿವಶರಣೆಯರ ವಚನ ಸಂಪುಟ–ಸಂ. ಡಾ॥ ವೀರಣ್ಣ ರಾಜೂರ, ಪುಟ 368, ವಚನ – 14

## ಅಧ್ಯಾಯ – 5

### ವಚನಕಾರ್ತಿಯರಲ್ಲಿ ರಾಜಕೀಯ ವಿಚಾರಗಳು
### (ಪ್ರತಿಭಟನೆಯ ಸ್ವರೂಪದ ಹಿನ್ನೆಲೆಯಲ್ಲಿಯಾಗಿದೆ)

ಪ್ರತಿಯೊಂದು ದೇಶದ ಸಂಸ್ಕೃತಿ ಹಾಗೂ ಸಾಮಾಜಿಕ ವ್ಯವಸ್ಥೆ ತನ್ನ ದೇಶಕ್ಕೊಂದು ರಾಜಕೀಯ ಮಾದರಿಯೊಂದನ್ನು ಹೊಂದಿರುತ್ತದೆ. ಆಯಾ ದೇಶದ ಆದರ್ಶ ಹಾಗೂ ಸುಖಿ ಸಾಮ್ರಾಜ್ಯ ಪರಂಪರೆಯು ರಾಜಕೀಯ ಸ್ಥಿತಿಗತಿಯ ಮೇಲೆ ಅವಲಂಬಿ ಸಿರುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ವಚನಕಾರರು ರಾಜನ ಅಥವಾ ರಾಜತ್ವದ ಅಡಿಯಲ್ಲಿದ್ದರೂ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಪ್ರಜಾಪ್ರಭುತ್ವಕ್ಕೇ ಆಶಿಸಿ, ರಾಜತ್ವದ ಬಲ ಹಾಗೂ ಸಹಕಾರವನ್ನು ನಿರಾಕರಿಸಿದರು.

ಜಾತಿ ಪದ್ಧತಿ, ವರದಕ್ಷಿಣೆ, ಬಾಲ್ಯವಿವಾಹ, ಉದ್ಯೋಗ, ಅಸ್ಪೃಶ್ಯತೆಯಗಳ ಹಾವಳಿಗಳು ರಾಜತ್ವದ ಬೆಂಬಲದಿಂದ ನಿವಾರಣೆಯಾಗಲಿಲ್ಲ. ಈ ಬಗೆಯ ಸುಧಾರಣೆಯನ್ನು ಧರ್ಮದ ಮುಖಾಂತರ ಸಾಧಿಸಬೇಕಾಯಿತು. ಸಮಾಜದ ಪರಿವರ್ತನೆಯ ತತ್ವಗಳನ್ನು ಅಳವಡಿಸಿಕೊಂಡರೇ ವಿನಹ: ನೇರವಾಗಿ ರಾಜತ್ವವನ್ನು ದೂರವುದಾಗಲಿ, ಪ್ರಶ್ನಿಸುವುದಾಗಲಿ ಮಾಡಲಿಲ್ಲ.

ವಚನ ಸಾಹಿತ್ಯದ ಸಂದರ್ಭದಲ್ಲಿ ರಾಜಕೀಯ ಮಹಿಳೆಯರಿಗೆ ಅನಿವಾರ್ಯ ಎಂಬತೆ ಎಲ್ಲಿಯೂ ಕಂಡುಬಂದಿಲ್ಲ. ಜೊತೆಗೆ ಸ್ತ್ರೀಯರಿಗೆ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ರಾಜಕೀಯ ವಲಯಗಳಲ್ಲಿ ಕಾಣಿಸಿಕೊಳ್ಳದಂತೆ ಕುಟುಂಬದ ಪೋಷಣೆಯ ಭಾರವನ್ನು ಅವಳ ಮೇಲೆ ಹೊರಿಸಲಾಗಿತ್ತು. ಸಾಂಪ್ರದಾಯಿಕ ಹೆಣ್ಣಿನ ಪಾತ್ರಕ್ಕಿಂತ ಬೇರೆಯಾಗಿ ಅವಳನ್ನು ಪರಿಭಾವಿಸುವ ಸ್ಥಿತಿ ಇರಲಿಲ್ಲ. ಆ ಕಾರಣ ಈ ಬಗೆಯ ವಿವಿಧ ವಲಯಕ್ಕೆ ಸಂಬಂಧಿಸಿದ ವಿಚಾರಗಳು ಸ್ತ್ರೀಯರಿಗೆ ಇರಬೇಕಾದ ಮೂಲಭೂತ ಅಗತ್ಯ ಹಾಗೂ ಅವಳ ಹಕ್ಕು ಎಂಬ ವಿಚಾರಕ್ಕೆ ಮಾನ್ಯತೆಯೇ ಇರಲಿಲ್ಲ. ಜೊತೆಗೆ ಹನ್ನೆರಡನೆಯ ಶತಮಾನದ ನಿರಂಕುಶ ಪ್ರಭುತ್ವದ ಕಾಲವಾಗಿದ್ದು ರಾಜಾಶ್ರಯವಿಲ್ಲದೆ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯವಿರಲಿಲ್ಲ.

### ವಚನಕಾರರಲ್ಲಿ ರಾಜಕೀಯದ ಪರಿಕಲ್ಪನೆ

ರಾಜಕೀಯದ ಬಗೆಗೆ ಶರಣೆಯರು ನಿರ್ಲಿಪ್ತರಾಗಿಯೆ ಪ್ರತಿಕ್ರಿಯಿಸುತ್ತಾರೆ. ಅಂದರೆ ರಾಜಕೀಯಕ್ಕಿಂತ ಅವರಲ್ಲಿ ಸಾಮಾಜಿಕ ಸಂಗತಿಗಳ ವಿಚಾರಗಳು ಹೆಚ್ಚಾಗಿವೆ. ನೀತಿಯುತ ಬದುಕಿನಿಂದ ಸಮಾಜದಲ್ಲಿ ಶಾಂತಿ ಹಾಗೂ ಸುಭದ್ರತೆ ಸಾಧ್ಯವೆಂಬ ನಂಬಿಕೆಯಿಂದ ನವ ಸಮಾಜ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಂಡರು ಅಂದರೆ, ಸಕಲ ಮನುಕುಲಕ್ಕೆ ಅರಿವು ಮೂಡಿಸುವ ಕೆಲಸದಲ್ಲಿ ಪಾಲ್ಗೊಂಡರು.

ವಚನಕಾರರು ರಾಜತ್ವದಲ್ಲಿದ್ದ ಕಂದಾಚಾರ ಹಾಗೂ ರಾಜರ ಬೆಂಬಲ ಪಡೆದಿದ್ದ ಪುರೋಹಿತಶಾಹಿ ಪ್ರಧಾನ ಸಂಸ್ಕೃತಿಯ ಹಾಗೂ ಶ್ರೀಮಂತರ ವರ್ತನೆಯಿಂದ ಸಹಿಸಲಸಾಧ್ಯ

ವಾದ ಹಿಂಸೆಯಿಂದ ಮನನೊಂದು ಅವರಲ್ಲಿನ ಅನೈತಿಕ ನಡವಳಿಕೆಯನ್ನು ಮುಖ್ಯವಾಗಿ ವಿಮರ್ಶೆಗೆ ಒಳಪಡಿಸಿದ್ದಾರೆ.

ರಾಜನಾದವನಲ್ಲಿ ತನ್ನ ವ್ಯಕ್ತಿತ್ವಕ್ಕೆ ತಕ್ಕ ಆಚಾರವಿರಬೇಕು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಗುಣಧರ್ಮವನ್ನು ಬೆಳೆಸಿಕೊಳ್ಳಬೇಕೆಂಬ ಸಾರ್ವತ್ರಿಕ ಸತ್ಯವನ್ನು ವಚನಕಾರರು ಸಾರಿ ಶರಣರು ಸ್ತ್ರೀಯ ಸ್ಥಾನಮಾನವನ್ನು ಎತ್ತರಿಸಲು ಪ್ರಯತ್ನಿಸಿದ್ದು ಸಮಗ್ರ ಕ್ರಾಂತಿಯ ಒಂದು ಭಾಗ ವಾಗಿತ್ತು. ಸ್ತ್ರೀಯರಿಗೆ ಎಲ್ಲಾ ಕ್ಷೇತ್ರಗಳಲ್ಲಿ ಅವಕಾಶವನ್ನು ವಿಸ್ತರಿಸಿ, ಆತ್ಮಸ್ಥೈರ್ಯವನ್ನು ತುಂಬಿದರು. ಮೂಕಳಂತೆ ದುಃಖವನ್ನು ತನ್ನ ಒಡಲಾಳದಲ್ಲಿ ಅಡಗಿಸಿಕೊಂಡು ಬಂದ ಸ್ತ್ರೀ ಮಾತ ನಾಡುವಂತೆ ಆದದ್ದು ಹೊಸ ಬಗೆಯ ಅರಿವಿನ ಅನುಭವಕ್ಕೆ ಸ್ತ್ರೀಯರು ತಮ್ಮನ್ನು ಒಡ್ಡಿಕೊಳ್ಳು ತ್ತಿದ್ದ ಸಂವೇದನೆಯನ್ನಾಗಿ ನೋಡಬಹುದು. ಈ ಹಂತದಲ್ಲೂ ವಚನಾಕಾರ್ತಿಯರಲ್ಲಿ ರಾಜ ಕೀಯ ಲೋಕ ದಟ್ಟ ಪ್ರಭಾವ ಬೀರಲಿಲ್ಲವೆಂಬುದು ಸತ್ಯ.

ಒಬ್ಬರನ್ನೊಬ್ಬರು ಆಳುವ ಸಂದರ್ಭಲ್ಲಿ ಇಬ್ಬರ ನಡುವಿನ ಸಂಬಂಧದಲ್ಲಿ ರಾಜಕೀಯ ಬಣ್ಣ ಮಾತ್ರ ಉಳಿಯುತ್ತದೆ. ಸ್ನೇಹ, ಪ್ರೀತಿ, ಸೌಹಾರ್ದತೆಗಳು ನಾಶವಾಗುತ್ತವೆ. ಆಗ ಮನುಷ್ಯ ಸಂಬಂಧದದಲ್ಲಿ ಗೊಂದಲ ಉಂಟಾಗುತ್ತದೆ. ರಾಜಕೀಯದ ನಿಯಮಗಳಡಿ ತಮ್ಮ ವ್ಯಕ್ತಿತ್ವ ನಾಶ ವಾಗಿ, ತಮ್ಮದಲ್ಲದ ಗುಣಸ್ವಭಾವದ ಮುಖವಾಡ ಧರಿಸಿ ದುರ್ಬಲರಾಗಬೇಕಾಗುತ್ತದೆಂದು ವಚನಕಾರರು ಮನಗಂಡಂತೆ ತೋರುತ್ತದೆ. ಆ ಕಾರಣ ರಾಜ ಹಾಗೂ ರಾಜತ್ವವನ್ನು ಅವರು ಲೆಕ್ಕಿಸುತ್ತಿರಲಿಲ್ಲವೆಂಬ ವಿಚಾರವನ್ನು ಮನಗಾಣಬಹುದು. ಹೀಗಾಗಿ ಗೌಣವಾಗಿ ಕೆಲವು ಸಂದರ್ಭಗಳಲ್ಲಿ ರಾಜತ್ವದ ವಿಚಾರಗಳು ಮಿಂಚಿಮರೆಯಾಗುತ್ತವೆ. ಬಸವಣ್ಣನವರ ರಾಜನ ಕುರಿತು ಹೇಳುವ ಈ ವಚನವನ್ನು ಗಮನಿಸಬೇಕು.

ವ್ಯಾದನೊಂದು ಮೊಲವ ತಂದಡೆ ಸಲುವ ಹಾಗಕ್ಕೆ ಬಿಲಿವರಯ್ಯಾ
ನೆಲನಾಳ್ವನ ಹೆಣನೆಂದಡೆ ಒಂದಡಿಕೆಗೆ ಕೊಂಬವರಿಲ್ಲ
ನೋಡಯ್ಯಾ
ಮೊಲನಿಂದ ಕರಕಷ್ಟ ನರನ ಬಾಳುವೇ
ಸಲಿನಂಬೊ ನಮ್ಮ ಕೂಡಲಸಂಗಮದೇವನ॥ [1]

ತನ್ನ ದೊರೆ ಬಿಜ್ಜಳನ ಬಳಿ ಭಂಡಾರದ ಉಸ್ತುವಾರಿಯನ್ನು ವಹಿಸಿದ್ದರೂ, ಬಸವಣ್ಣನ ವರು ಆಂತರ್ಯದಲ್ಲಿ ಅರಸೊತ್ತಿಗೆಯ ವಿರೋಧಿಯಾಗಿದ್ದರು. ಉನ್ನತ ಸ್ಥಾನವನ್ನು ಹೊಂದಿ ದ್ದರೂ ವೈಯಕ್ತಿಕ ನೆಲೆಯಲ್ಲಿ ತಮ್ಮತನವನ್ನೂ ಕನಿಷ್ಟತಮದಲ್ಲಿ ಗುರುತಿಸಿಕೊಳ್ಳುತ್ತಿದ್ದರು. ಜನಸಾ ಮಾನ್ಯರ ವೈಯಕ್ತಿಕ ಸುಧಾರಣೆಗೆ ಹೆಚ್ಚಿನ ಮಹತ್ವ ನೀಡಿದ್ದರು. ನರಮನುಷ್ಯನು ತನಗೆ ಸಾವು ಖಚಿತವೆಂಬುದನ್ನು ಅರಿತು ಸರ್ವಸಮಾನತೆಯಿಂದ ಬದುಕಿ ಸುಖಿ ಸಮಾಜವನ್ನು ಕಟ್ಟಲು ಬಸವ ಣ್ಣನವರು ಕರೆಕೊಟ್ಟಿರುವುದನ್ನಿಲ್ಲಿ ಕಾಣಬಹುದಾಗಿದೆ.

ಲಾಂಛನ ಹೊರಗೆ ಬಂದಿರಲು, ಒಳಗೆ ಲಿಂಗಾರ್ಚನೆಯೆಂತಯ್ಯಾ
ಮುಖದಲ್ಲಿ ಕಟ್ಟಿದ ಕನ್ನಡಿ, ಮೂಗಿನ ಮೇಲಣ ಕತ್ತಿ
ಸಮಯಾಚಾರವೆಂತುಂಟಯ್ಯಾ?

ಕೂಡಲಸಂಗಮದೇವಯ್ಯಾ ಮೂಗಕೊಯ್ಯದೆ ಮಾಣ್ಬನೆ
ಹೇಳಯ್ಯಾ॥[2]

ದೊಡ್ಡ ಮನುಷ್ಯರೆನಿಸಿ ತೋರಿಕೆಯ ಜೀವನವ ನಡೆಸುವವರನ್ನು ಬಸವಣ್ಣ ಲೇವಡಿ ಮಾಡುತ್ತಾರೆ. ಆಚಾರ ಶುದ್ಧಿಯಿಂದ ಲಿಂಗಧಾರಣೆ ಮಾಡಿ ಅಂತರಂಗ-ಬಹಿರಂಗ ಶುದ್ಧಿ ಹೊಂದಿ ಬಾಳದಿದ್ದರೇನು ಪ್ರಯೋಜನ?ವೆಂದು ಎಚ್ಚರಿಸಿದ್ದಾರೆ. ಯುದ್ಧ ಕೋಪ, ತೋರಿಕೆಯಲ್ಲಿ ಬದುಕಿನ ಕೊನೆಗಾಣುವ ಜನರಿಗೆ ಸೋದರತ್ವದ ನೈಜ ಬದುಕಿನ ಸಂದೇಶವನ್ನು ನೀಡಿದರು.

ರಾಜರ ಆಳ್ವಿಕೆಯ ಅನರ್ಥಗಳನ್ನು ಮನಗಂಡಿದ್ದ ಬಸವಣ್ಣನವರು ಯಾವತ್ತೂ ಅರಸರ ಅಥವಾ ರಾಜತ್ವದ ಬೆಂಬಲವಾಗಿರಲಿಲ್ಲ, ಅಧಿಕಾರ ದುರುಪಯೋಗ, ಸಮುದಾಯದ ಶೋಷಣೆ ಮತ್ತು ಪ್ರಜೆಗಳ ಹಾಗೂ ಬಡಜನರ ದಮನವನ್ನವರು ಸಹಿಸಲಿಲ್ಲ.

ಬಸವಣ್ಣನವರ ರಾಜಕೀಯ ಗ್ರಹಿಕೆಯೆಂತೆಯೇ ವಚನಕಾರ್ತಿಯರ ಪ್ರಜ್ಞೆ ಒಡಮೂಡಿರುವುದನ್ನು ಕಾಣಬಹುದು.

**ವಚನಕಾರ್ತಿಯರು ರಾಜತ್ವವನ್ನು ಗ್ರಹಿಸಿರುವ ನೆಲೆ ಹಾಗೂ ರಾಜಕೀಯವನ್ನು ನಿರಾಕರಿಸಿರುವ ನಿಲುವಿನ ಸ್ವರೂಪ :-**

**ಅಕ್ಕಮಹಾದೇವಿ**

ಅಕ್ಕಮಹಾದೇವಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಚಳುವಳಿಕಯಲ್ಲಿ ಮಾನವತಾವಾದಿ ಧೋರಣೆಯಿಂದ ಸಮಾಜದಲ್ಲಿ ಜಾಗೃತಿ ಮೂಡಿಸಿದ ಧೀಮಂತ ಸಾಧಕಿ. ಇವಳು ರಾಜತ್ವವನ್ನು ಅಪರಾಧವೆಂಬಂತೆ ಕಾಣುತ್ತಾಳೆ.

ಕಡೆಗೆ ಮಾಡದ ಭಕ್ತಿ ದೃಢವಿಲ್ಲದಾಳುತನ
ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯಾ?
ಮಾಡಲಾಗದಳಿಮನದ ಮಾಡಿದರೆ ಮನದೊಡೆಯ ಬಲ್ಲನೈ ಸೆ
ವಿರಳವಿಲ್ಲದ ಮಣಿಯ ಪವಣಿಸಿಹೆನೆಂದಡೆ
ದುರುಳ ಚೆನ್ನಮಲ್ಲಿಕಾರ್ಜುನಯ್ಯ ನೆಂತೊಲಿವನಯ್ಯ॥[3]

ಅಕ್ಕಮಹಾದೇವಿ ಲೌಕಿಕದ ಸಂಬಂಧಕ್ಕೆ ಅಂಟಿಕೊಳ್ಳದೆ ಎಲ್ಲವನ್ನೂ ಜಾಡಿಸಿ ಶಿವನ ಸಾಕ್ಷಾತ್ಕಾರಕ್ಕಾಗಿ ವೈರಾಗ್ಯ ಸಾಧನೆ ಕೈಗೊಂಡವಳು. ಅವಳಿಗೆ ರಾಜಕೀಯ ಬೇಕಾಗಿಲ್ಲವಾದರೂ, ಅರಸನಾದವನು ದೃಢವಾದ ಮೌಲ್ಯಗಳನ್ನು ತತ್ವಗಳನ್ನು ಸ್ವೀಕರಿಸಿ ತನ್ನ ಕಾಯಕದಲ್ಲಿ ನಿರತನಾಗಿರಬೇಕೆಂಬುದನ್ನು ಮನದಟ್ಟು ಮಾಡಿಸುತ್ತಾಳೆ. ಲೌಕಿಕದಲ್ಲಿ ಅರಸನಾದರೂ, ಅವನನ್ನು ತೊರೆದು ಅಲೌಕಿಕ ಅರಸನಾದ ಶಿವನೆಂಬ ಒಡೆಯನ ಒಲುಮೆಯನ್ನು ಹೊಂದುವುದು ಮುಖ್ಯವೆಂದು ಭಾವಿಸುತ್ತಾಳೆ.

ಹೆಣ್ಣಿಗೆ ಮದುವೆಯಿಂದಲೇ ಮೋಕ್ಷವೆಂಬ ಲೋಕ ಗೃಹಿಕೆಯನ್ನು ತಳ್ಳಿಹಾಕಿ ವಿರಾಗಿನಿಯಾದುದು ಸಾಂಪ್ರದಾಯಿಕ ಸಮಾಜಕ್ಕೇ ಅರಗಿಸಿಕೊಳ್ಳಲಾಗದಾಯಿತು. ರಾಜನಾದ ಕೌಶಿಕನನ್ನು ಬಲವಂತವಾಗಿ ಮದುವೆಯಾದ ಅಕ್ಕಮಹಾದೇವಿ ತನ್ನ ಆಧ್ಯಾತ್ಮಿಕ ಸಾಧನೆಗೆ ಪ್ರತಿಕೂಲವೆನಿಸಿದ ವಿವಾಹ ಸಂಬಂಧವನ್ನು ತ್ಯಜಿಸಿ ಹೋಗುತ್ತಾಳೆ. ಅರಮನೆಗೆ, ಅರಸೊತ್ತಿಗೆಗೆ ಹಾತೊರೆವರ ರಾಜತ್ವದ ಹಿನ್ನೆಲೆ ಬಯಸುವ ಸಮಾಜಕ್ಕೆ ಅವಳ ಆದರ್ಶ ಅನುಕರಣೀಯವಾಗಿದೆ. ರಾಜತ್ವ ಅವಳಿಗೆ ಅಸಹನೀಯ ಒತ್ತಡವಾಗಿ ಪರಿಣಮಿಸಿತು. ಬದಲಿಗೆ ತನ್ನ ದೇಹ ಭಾವ ಜೀವಗಳನ್ನು ಚೆನ್ನಮಲ್ಲಿಕಾರ್ಜನನಿಗೆ ಮೀಸಲಾಗಿರಿಸಿರುವ ಭಕ್ತಿಯ ಚಿತ್ರಣ ಕಂಡುಬರುತ್ತದೆ.

ಜೊತೆಗೆ ದಿನದಿಂದ ದಿನಕ್ಕೆ ಸಾಮಾಜಿಕ, ಧಾರ್ಮಿಕ, ರಾಜಕೀಯ ಶಾಂತಿಯ ಭಂಗವಾಗುತ್ತಾ ಹಿಂಸೆ ಹೆಚ್ಚುತ್ತಿತ್ತು. ಸಮಾಜದಲ್ಲಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಆರ್ಥಿಕ ಕ್ರಮಗಳು ನ್ಯಾಯೋಚಿತವಾಗಿ ಎಲ್ಲರನ್ನೂ ತಲುಪುತ್ತಿರಲಿಲ್ಲ. ಇದನ್ನೆಲ್ಲಾ ವಚನಕಾರರು ವಿವಿಧ ರೀತಿಯಲ್ಲಿ ಈಗಾಗಲೇ ಗುರುತಿಸಿದ್ದರು. ಸಮುದಾಯದ ಸಾಂಸ್ಕೃತಿಕ ಆಶಯ, ಸಾಮಾಜಿಕ ಪ್ರಗತಿ, ನಾಗರೀಕ ಬದುಕು, ಪ್ರಭುತ್ವದ ಹಿಂಸೆಗಳೆಲ್ಲಾ ಮಾನವೀಯ ನೆಲೆಗಟ್ಟಿನಿಂದ ದೂರವಾಗಿದ್ದುದರ ಪರಿಣಾಮವಾಗಿ ವಚನಕಾರರು ರಾಜತ್ವದಿಂದ ದೂರಸರಿದರು. ಹೀಗೆ ರಾಜಕೀಯ ನಿರಾಕರಣೆಯ ಮೂಲಕವೇ ಪ್ರತಿಭಟನಾತ್ಮಕ ಸೂಚನೆಯನ್ನು ನೀಡಿದರು.

**ಅಕ್ಕಮ್ಮ**

ಅಕ್ಕಮ್ಮ ಸಾಮಾನ್ಯ ವರ್ಗದಿಂದ ಬಂದವಳು. ವ್ರತ ನಿಯಮಗಳನ್ನು ಬದುಕಿನಲ್ಲಿ ಮುಖ್ಯವಾದುವೆಂದು ಪರಿಗಣಿಸಿದ ಸ್ವತಂತ್ರ ಮನೋಭಾವ ಉಳ್ಳವಳು. ವೇಷಧಾರಿಗಳನ್ನೂ ಆಚಾರವಿಹೀನರನ್ನೂ ತೀವ್ರವಾಗಿ ಖಂಡಿಸುತ್ತಾಳೆ.

ಅರಸಿಗೆ ಆಚಾರ ಅನುಸರಣೆಯಾಯಿತ್ತೆಂದು
ಸದಾಚಾರಿಗಳೆಲ್ಲಾ ಬನ್ನಿ ಎಂದು
ಕೂಲಿಗೆ ಹಾವಕಚ್ಚಿಸಿಕೊಂಡು, ಸಾವತರೆದಂತೆ
ದ್ರವ್ಯದ ಮುಖದಿಂದ ಸರ್ವರ ಕೂಡಿ ತಪ್ಪನೊಪ್ಪಗೊಳ್ಳಿಯೆಂದು
ದಿಪ್ಪನೆ ಬೀಳುತ್ತ ತನ್ನ ವ್ರತದ ದರ್ಪಂಗೆಟ್ಟು
ಕೀಲಿಗೆ ದೇವಾಲಯವ ನೋಡುವವನಂತೆ,
ಕಂಬಳಕ್ಕೆ ಅಮಂಗಲವ ತಿಂಬವನಂತೆ, ಇವನ ದಂಧುಗವನೋಡಾ
ಇವನ ಸಂಗವ ಮಾಡಿದವನು ಆಚಾರಕ್ಕೆ ಅಂದೆ ಹೊರಗು
ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವೇ ನೀನೆ ಬಲ್ಲೆ.॥[4]

ಎಲ್ಲರೂ ಎಂತಹ ಪ್ರಸಂಗದಲ್ಲೂ ನಿಯಮಗಳನ್ನು ಬಿಡದೆ ಪಾಲಿಸುವ ಬಾಳುವ ಧೈರ್ಯ ಹಾಗೂ ಅನಾಚಾರ – ಅನಿಷ್ಟಗಳ ವಿಚಾರಗಳನ್ನು ಅಲ್ಲಗಳೆಯುವ ಕೆಚ್ಚನ್ನು ಹೊಂದಬೇಕೆಂಬ ಆಶಯವನ್ನು ಅಕ್ಕಮ್ಮ ಇಲ್ಲಿ ವ್ಯಕ್ತಪಡಿಸಿದ್ದಾಳೆ.

ಅರಸನೆಂದ ಮಾತ್ರಕ್ಕೆ ಅವನನ್ನು ಸಕಲ ವಿಚಾರಗಳಲ್ಲೂ ಅನುಸರಿಸುವುದು ಕೂಲಿಗಾಗಿ ಹಾವಕಚ್ಚಿಸಿಕೊಂಡಂತಾಗುತ್ತದೆ ಎಂದಿದ್ದಾಳೆ. ಹಣದ, ಅಧಿಕಾರದ ದಾಹದಿಂದ ಚಿತ್ತಸ್ಥಿರತೆಯನ್ನು

ಕಳೆದುಕೊಂಡು ದುರ್ಬಲರಾಗುವರ ಕಂಡು, ಹಿರಿಯರ ಹಿರಿತನಕ್ಕೆ, ದಾಸರಾಗುವವರ ಕಂಡು ಖಂಡಿಸುತ್ತಾಳೆ. ವ್ರತಸ್ತನಾದವನು ಅರಸೊತ್ತಿಗೆ, ಐಶ್ವರ್ಯ, ಅಧಿಕಾರದಿಂದ ದೂರನಾಗಿದ್ದು ಜನಹಿತ ಕಾರ್ಯಗಳನ್ನು ಕೈಗೊಳ್ಳಬೇಕು. ಇಲ್ಲವಾದರೆ ಅವನು ಆಚಾರಕ್ಕೆ ದೂರವೆಂದು ಔಚಿತ್ಯ ಪೂರ್ಣ ಮಾತುಗಳಿಂದಲೇ ನಿಖರವಾಗಿ ವಿಚಾರಗಳನ್ನು ಅಭಿವ್ಯಕ್ತಿಸಿದ್ದಾಳೆ.

> ಕಾಯಕಕೃತ್ಯ, ನೇಮಕೃತ್ಯ, ಆಚರಣೆಕೃತ್ಯ, ದಾಸೋಹಕೃತ್ಯ,
> ಭಾವಕೃತ್ಯ,
> ಸೀಮೆಕೃತ್ಯ, ಯಾಚಕಕೃತ್ಯ, ಗಮನಕೃತ್ಯ, ಲಿಂಗಕೃತ್ಯ, ಜಂಗಮಕೃತ್ಯ,
> ಪಾದೋದಕಕೃತ್ಯ, ಪ್ರಸಾದಕೃತ್ಯ, ಕೊಡೆಕೊಳ್ಳೆನೆಂಬ ಉಭಯಕೃತ್ಯ,
> ಮರೆದರಿಯೆ ಅರಿದು ಮರೆಯೆನೆಂಬ ಅರಿವು ಕೃತ್ಯ
> ತನ್ನ ಕೃತ್ಯಕ್ಕೆ ಆವುದು ನಿಷೇಧವೆಂದು ಬಿಟ್ಟಲ್ಲಿ
> ರಾಜಹೇಳಿದನೆಂದು, ಗುರುವಾಜ್ಞೆಯ ಮೀರಿದಿರೆಂದು,
> ಶರಣದ ಸಮೂಹ ಹೇಳಿದರೆಂದು,
> ವಿಕ್ಕಾರು ತನ್ನ ಪರಿಸ್ಪಂದಿಗಳರಿದರೆಂದು -
> ಇಂತೀ ಗುಣಕ್ಕೆ ಅನುಸರಣೆಯ ಮಾಡಿದೆನಾದಡೆ ಎನಗದೆ ಭಂಗ
> ಇದಕ್ಕೆ ನೀ ಒಪ್ಪಿದಡೆ, ಆಚಾರವೇ ಪ್ರಾಣವಾದ ರಾಮೇಶ್ವರ
> ಲಿಂಗವೆ
> ನೀ ತಪ್ಪದೆಯಾಥಡೆ ನಿನಗೆ ಎಕ್ಕಲನರಕ

ಭಕ್ತಿ ಹಾಗೂ ಕಾಯಕದಲ್ಲಿನಿರತನಾದವನು ಯಾವ ಹಂಗಿಗೂ ಒಳಗಾಗದೆ ನಡೆಯ ಬೇಕು, ದುರಾಲೋಚನೆಯಿಂದ ಅರಸೊತ್ತಿಗೆಯ, ಗುರುಹಿರಿಯರ ಅನುಸರಣೆ ಮಾಡಿದನಾದರೆ ತನ್ನ ಆತ್ಮವಂಚನೆ ಮಾಡಿಕೊಂಡಂತೆ ಎಂಬುದು ಅಕ್ಕಮ್ಮನ ವಾದವಾಗಿದೆ.

**ಅಮುಗೆರಾಯಮ್ಮ**

ರಾಯಮ್ಮ ಕಂಡದ್ದನ್ನು ಕಂಡಂತೆ ಬಿಚ್ಚುನುಡಿಯುವವಳು, ವೇಷಧಾರಿಗಳನ್ನು, ತೋರಿಕೆಯ ಭಕ್ತಜನರನ್ನು ಖಂಡಿಸಿ ಸ್ವವಿಮರ್ಶೆಯ ಗುಣಗಳನ್ನು ಬೆಳೆಸಿಕೊಳ್ಳುವುದು ಅಗತ್ಯವೆನ್ನುತ್ತಾಳೆ. ಈ ಬಗೆಯಲ್ಲಿ ರಾಯಮ್ಮ ಭಕ್ತನ ವೇಷ ಬೇಕಿಲ್ಲವೆಂದು ಗಟ್ಟಿಯಾಗಿ ನುಡಿಯುವಲ್ಲಿ ಅವಳ ಮನೋಭಾವವನ್ನು ಈ ಕೆಳಗಿನ ವಚನ ಪರಿಣಾಮಕಾರಿಯಾಗಿ ತಿಳಿಸಿಕೊಡುವಂತಿದೆ.

> ಒಡೆಯರ ಕಂಡಡೆ ಬಡಿವುದಯ್ಯಾ ಬಾಲವನುಸುನಿ
> ಕೊಡುವ ಕೊಂಬುವರ ಕಂಡು ಅವರಡಿಗೆರಗುವರಯ್ಯಾ
> ಮೃಡನ ವೇಷವ ತೊಟ್ಟು
> ಕುರಿಗಳಂತೆ ತಿರುಗುವ ಜಡಜೀವಗಳ ಕಂಡಡೆ
> ಮೃಡನ ಶರಣರು ಮೋರೆಯನೆತ್ತಿ ನೋಡರು
> ಕಾಣಾ ಅಮುಗೇಶ್ವರಾ॥[6]

ಅರಸೊತ್ತಿಗೆಯ, ಉಳ್ಳವರ, ಕೊಡುವರ ಕಂಡು ಕಪಟ ನಾಟಕಧಾರಿಗಳಾಗಿ ಅವರಡಿಗಳಿಗೆ ಎರಗುವರನ್ನು ಮೂದಲಿಸಿ, ಜಡ ಸ್ವರೂಪಿಯಾದ ಕುರಿಯಂತಾಗುವರು ಎಂದಿದ್ದಾಳೆ. ಈ ರೀತಿಯ ಸೋಗಿನ ವ್ಯಕ್ತಿತ್ವ ನಿರಾಕರಣೆಯಲ್ಲಿ ಭಕ್ತನ ಏಳಿಗೆಯಿದೆ ಎಂಬ ಅಂಶವನ್ನು ಸೂಕ್ಷ್ಮವಾಗಿ ತಿಳಿಸುತ್ತಿರುವ ಸಂದರ್ಭದಲ್ಲೇ ರಾಯಮ್ಮನ ಗಟ್ಟಿತನವನ್ನು ಮನಗಾಣಬಹುದು.

ಪೊಡವಿಯನಾಳುವ ದೊರೆಗಳೆಂಬೆನೆ?
ಮಡನ ವೇಷ ಧರಿಸಿದವರ ಕಡುಗಲಿಗಳೆಂಬೆನೆ?
ಅರಿವು ಆಚಾರವನರಿಯದವರ ಲಿಂಗೈಕ್ಯರೆಂಬೆನೆ?
ಎನ್ನೆನಯ್ಯಾ ಅಮುಗೇಶ್ವರಲಿಂಗವೆ॥[7]

ಅರಸನಿಗಿರಬೇಕಾದ ಗುಣವಿಲ್ಲದವರ ತೋರಿಕೆಯ ಭಕ್ತರ ವೇಷಧಾರಿಗಳ ಅರಿವು ಆಚಾರಗಳ ತಿರಸ್ಕರಿಸಿದವರುಗಳು ಲಿಂಗೈಕ್ಯರಾಗರು ಎಂದು ರಾಯಮ್ಮ ನಿರ್ದಾಕ್ಷಿಣ್ಯವಾಗಿ ಈ ಮೇಲಿನ ವಚನದ ಮೂಲಕ ಸ್ಪಷ್ಟಪಡಿಸಿದ್ದಾಳೆ.

### ಆಯ್ದಕ್ಕಿ ಲಕ್ಕಮ್ಮ

ಲೋಕೋದ್ಧಾರದ ಕಾಯಕ ತತ್ವವನ್ನು ಸಂಪೂರ್ಣ ಒಪ್ಪಿಕೊಂಡು ಅದರಂತೆ ತನ್ನ ಪತಿಯೊಂದಿಗೆ ಬದುಕಿ ಕಾಯಕ ಜೀವಿ ಎನಿಸಿದಳು. ಅಪವಿತ್ರವಾದ ಗಳಿಕೆಯನ್ನು ತಿರಸ್ಕರಿಸುವ ಶಕ್ತಿ ಅವಳಲ್ಲಿ ಇತ್ತೆಂಬುದನ್ನು ಈ ವಚನದ ಮೂಲಕ ತಿಳಿಯ ಬಹುದು.

ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತರಿಗಲ್ಲದೆ,
ಅಚಾತರಿಗುಂಟೆ ಅಯ್ಯಾ?
ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ
ಮಾರಯ್ಯಾಪ್ರಿಯ ಅಮಲೇಶ್ವರ ಲಿಂಗಕ್ಕೆ ದೂರ ಮಾರಯ್ಯ॥[8]

ನಿಜವಾದ ಭಕ್ತನಿಗೆ ಆಸೆಯಿರಕೂಡದೆಂದು, ಆಸೆ-ರೋಷಗಳು ಅರಸರ, ಯಮದೂತರ ಗುಣವೆಂದು ಗಳಿಕೆಗೆ ಅಥವಾ ಸಂಪಾದನೆಗೆ ಹೊಸರೂಪ ಹಾಗೂ ಅರ್ಥವನ್ನು ನೀಡಿದಳು. ಹೀಗೆ ಹೆಚ್ಚಿನ ಆಸೆ, ದುಷ್ಕರ್ಮಗಳನ್ನು ತೊರೆದು ಮನ ಭಾವಶುದ್ದಿಯಿಂದ ಲಿಂಗದ ಸಾನಿಧ್ಯ ಹೊಂದುವುದೆಂಬ ನಿಲುವನ್ನು ತಳೆದಿದ್ದಾಳೆ.

ಹೀಗೆ ತನ್ನ ಪತಿಯ ಆಸೆಯನ್ನು ನಿವಾರಿಸುವ ಸಂದರ್ಭದಲ್ಲೇ ಅರಸೊತ್ತಿಗೆಯ ದೈತ್ಯಕಲ್ಪನೆಯನ್ನು ನಿರ್ಲಕ್ಷೆಯಿಂದ ಅಲ್ಲಗಳೆದಿರುವುದನ್ನು ಗಮನಿಸಬಹುದು.

### ಹಡಪದಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ

ಲಿಂಗಮ್ಮ ಕನಿಷ್ಠಕುಲದಲ್ಲಿಯೇ ಹುಟ್ಟಿ ಆಧ್ಯಾತ್ಮ ಸಾಧಕಳಾಗಿ ಬೆಳೆದವಳು. ಇವಳು ಗುರು-ಲಿಂಗ-ಜಂಗಮರಿಗೆ ಮಾತ್ರ ನಿಷ್ಠಾವಂತಳಾಗಿದ್ದಳೇ ವಿನಹಃ ಲೋಕದ ರಾಜನಿಗಲ್ಲ,

ನಾನೊಂದು ಹಾಳೂರಿಗೆ ಹೋಗುತ್ತಿರಲು, ಆ ಹಾಳೂರ ಹೊಕ್ಕಡೆ
ಅಲ್ಲಿ ನಾಯಿಗಳು ಅಟ್ಟಿಕೊಂಡು ಬಂದವು
ಹುಲಿಕರಡಿ ಅಡ್ಡಲಾದವು
ಇವ ಕಂಡು ನಾ ಹೆದರಿಕೊಂಡು
ನನ್ನ ಕೈಗೊಂಡು ಕಲ್ಲನೋಡುತ್ತ ಬುತ್ತಿರಲು
ಆ ನಾಯಿಗಳು ಓಡಿಹೋದವು
ಹುಲಿ ಕರಡಿಗಳು ಅಲ್ಲಿಯೇ ಬಯಲಾದವು
ಆ ಊರು ನಿರ್ಮಲವಾಯಿತು
ಆ ನಿರ್ಮಲವಾದ ಊರ ಹೊಕ್ಕು ನೋಡಲು
ಆ ನೋಡುವ ನೋಟವು ಆ ಊರನಾಳುವ ಅರಸು,
ಆ ಊರು ಕೂಡಿ ಒಂದಾದವು
ಆ ಒಂದಾದುದನೆ ನೋಡಿ, ದ್ವಂದ್ವನೆ ಹರಿದು,
ನಿಮ್ಮ ಸಂಗಸುಖದೊಳಗೋಲಾಡಿ ಸುಖಿಯಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ||[9]

ಲೌಕಿಕದಲ್ಲಿ ಹುಟ್ಟಿದ ವ್ಯಕ್ತಿಗೆ ಪಂಚೇಂದ್ರಿಯಗಳು ಹಾಗೂ ಅರಿಷಡ್ವಗಳು ದೇಹವನ್ನು ಆಕ್ರಮಿಸಿ, ಲೌಕಿಕದೆಡೆಗೆ ಎಳೆಯುತ್ತಿರುವಾಗ ಲಿಂಗಮ್ಮ ಈ ಆಕರ್ಷಣೆಯನ್ನು ಹಾಳುರು, ಕರಡಿ, ನಾಯಿಗೆ ಹೋಲಿಸಿದ್ದಾಳೆ. ಈ ದೌರ್ಬಲ್ಯಗಳಿಂದ ಮುಕ್ತರಾಗದೆ ಆತ್ಮಸಾಕ್ಷಾತ್ಕಾರವಾಗದು ಎಂಬ ಅರಿವು ಉಂಟಾದಾಗ ಕೈಯಲ್ಲಿ ಒಂದು ಕಲ್ಲು ಹಿಡಿದೆ ಎನ್ನುತ್ತಾಳೆ. ಇದರರ್ಥ ಈ ಎಲ್ಲಾ ದೌರ್ಬಲ್ಯ ಹಾಗೂ ಆಕರ್ಷಣೆಯನ್ನು ಮೆಟ್ಟಿನಿಂತ ಭಕ್ತನೊಬ್ಬನ ಖಚಿತವಾದ ಸ್ಥಿರತೆಯನ್ನು ಸಾದರ ಪಡಿಸುತ್ತದೆ. ಭಕ್ತನು ಈ ದೃಢನಿಲುವು ತಳೆದಾಗ ಈ ಇಂದ್ರಿಯಾಕರ್ಷಣೆಗಳಾದ ನಾಯಿ, ಹುಲಿ, ಕರಡಿಗಳೆಲ್ಲವೂ ಓಡಿದವು ಅರ್ಥಾತ್ ಪಂಚೇಂದ್ರಿಯ ಮತ್ತು ಅರಿಷಡ್ವರ್ಗಗಳು ಈ ಸ್ಥಿರ ಭಕ್ತನ ಬಳಿ ಸುಳಿಯಲಾರವು. ಆಗ ಲೌಕಿಕದಿಂದ ವಿಮುಖನಾಗಿ ಜೀವಾತ್ಮ ಪರಮಾತ್ಮನತ್ತಸಾಗಿ ಆ ಅಲೌಕಿಕದ ಊರನ್ನಾಳುವ ಸೃಷ್ಟಿಕರ್ತನಾದ ಶಿವನಲ್ಲಿ ಸಂಪೂರ್ಣವಾಗಿ ಲೀನವಾಗುವ ನಿರ್ಮಲ ಭಕ್ತಿಯ ವ್ಯಕ್ತಿತ್ವವನ್ನು ಹೊಂದುವನು. ಭಕ್ತ ದೈವೀಲೀಲೆಯಲ್ಲಿ ನೀರಿನೊಳಗೆ ನೀರು ಬೆರೆತಂತೆ ಬೆರೆತು ಹೋಗುವ ಪರಿಯನ್ನು, ಲೌಕಿಕದಿಂದ ಅಲೌಕಿಕತೆಯತ್ತ ಸಾಗಿ ಅಂತಿಮ ಗುರಿಯನ್ನು ತಲುಪಿ ಆನಂದಮಯ ಸ್ಥಿತಿಯನ್ನು ತಲುಪುವ ಭಕ್ತಿತತ್ವವನ್ನು ಪ್ರತಿಮೆಗಳ ಮೂಲಕ ಲಿಂಗಮ್ಮ ಈ ವಚನದಲ್ಲಿ ದಾಖಲು ಪಡಿಸಿದ್ದಾಳೆ.

ವಾಸ್ತವ ರಾಜನ ಅಧಿಕಾರ ಹಾಗೂ ರಾಜನ ಆನಂದವನ್ನು ತೊರೆದು ಅಲೌಕಿಕ ಸಾಮ್ರಾಜ್ಯವನ್ನಾಳುವ ರಾಜ ಎಂದು ಶಿವನನ್ನು ಸಂಭೋದಿಸಿ ಆ ದೈವೀ ರಾಜನ ಸಂಗದೊಳಗೆ ಭಕ್ತಿಸ್ಥಲದಲ್ಲಿ ಸುಖಃವಾಗಿಹೆನು ಎಂದು ಹೇಳುವ ಪರಿ ಅಪರೂಪ ಹಾಗೂ ಅಪೂರ್ವವಾದುದು. ಸಾಮಾನ್ಯವಾಗಿ ಶರಣರು ರಾಜತ್ವ ಹಾಗೂ ರಾಜಾಧಿಕಾರವನ್ನು ವಿರೋಧಿಸುತ್ತಾರೆ. ಆದರೆ

ಲಿಂಗಮ್ಮ ರಾಜತ್ವ, ಅಧಿಕಾರ, ಆನಂದವನ್ನು ಆಧ್ಯಾತ್ಮಿಕವಾಗಿ ಪರಿಭಾವಿಸಿ ಅಲೌಕಿಕ ಸುಖ ಅತೀಂದ್ರಿಯ ಸುಖವೆಂದು ಹೇಳಿರುವುದು ಕನ್ನಡ ಸಾಹಿತ್ಯಹಾಗೂ ಸಾಂಸ್ಕೃತಿಕ ಲೋಕದಲ್ಲಿ ವಿಶಿಷ್ಟವಾದ ಚಿಂತನೆಯಾಗಿದೆ.

ವಚನ ಸಾಹಿತ್ಯದ ಸ್ವರೂಪವನ್ನು ಆ ಕಾಲದ ಸಾಮಾಜಿಕ, ಧಾರ್ಮಿಕ, ಕೌಟುಂಬಿಕ, ಸಾಂಸ್ಕೃತಿಕ ಸ್ಥಿತಿಗತಿಗಳು ನಿಯಂತ್ರಿಸಿ ಹಾಗೂ ನಿರ್ಧರಿಸಿದಂತೆಯೇ ರಾಜಕೀಯ ಪರಿಸ್ಥಿತಿಯ ಮಾನದಂಡಗಳು ನಿರ್ಧರಿಸಿವೆ. ಇದನ್ನು ಡಾ॥ ಎಂ. ಚಿದಾನಂದ ಮೂರ್ತಿಯವರು ಹೀಗೆ ಹೇಳಿದ್ದಾರೆ,

"ಆ ಕಾಲಕ್ಕೆ ಭಾರತದ ಅತ್ಯಂತ ಬಲಿಷ್ಠ ಸಾಮ್ರಾಜ್ಯಗಳಲ್ಲಿ ಒಂದಾಗಿದ್ದ ಚಾಲುಕ್ಯರ ಕಾಲದಲ್ಲೇ, ಅವರ ಸಾಮ್ರಾಜ್ಯದಲ್ಲೇ ಅರಸೊತ್ತಿಗೆಯನ್ನು ತಾತ್ವಿಕಮಟ್ಟದಲ್ಲಾದರೂ ಎದುರಿಸಿ ನಿಂತ ಮತ್ತು ಸಾಮಾಜಿಕ ಆಂದೋಲನವೇ ಪ್ರಧಾನ ಲಕ್ಷಣವಾಗಿರುವ ಧರ್ಮವೊಂದರ ಉದಯ ವಿಸ್ಮಯವಾಗಿ ಕಾಣುತ್ತದೆ. ವಚನವಾಙ್ಮಯ ಹುಟ್ಟಿದ್ದೇ ಸಾಮಾಜಿಕ ಆಂದೋಲನದ ಅಂಗವಾಗಿ. ಅದರ ಮಾಧ್ಯಮವಾಗಿ, ಈ ಆಂದೋಲನದ ಪ್ರಮುಖ ನಾಯಕರಾದ ಬಸವಣ್ಣ ಅಲ್ಲಮ ಇವರ ವಚನಗಳಲ್ಲಿ ಸಾಮಾಜಿಕ ಅನ್ಯಾಯಗಳ ಬಗ್ಗೆ ಸ್ಪಷ್ಟವಾದ ಆಕ್ರೋಶವೂ ಅದನ್ನು ಸರಿಪಡಿಸುವ ತೀವ್ರಾಕಾಂಕ್ಷೆಯೂ ಕಂಡು ಬರುತ್ತದೆ. ಈ ಆಂಧೋಲನದ ನಾಯಕರಿಗೆ ಇದ್ದ ಹಿನ್ನಲೆಯೂ ಇದಕ್ಕೆ ಪ್ರೋತ್ಸಾಹದಾಯಕವಾಗಿದ್ದಿತು. ಅವರು ಯಾರನ್ನು ತಮ್ಮ ಆದರ್ಶವಾಗಿ ಭಾವಿಸಿದ್ದರೋ ಆ ಹಿರಿಯ ಸಮಕಾಲೀನ ಭಕ್ತರು ತಮ್ಮದೇ ಆದ ರೀತಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರಭುತ್ವದ ಬಗ್ಗೆ ನಿರ್ಲಕ್ಷ್ಯವನ್ನು ವ್ಯಕ್ತಪಡಿಸಿದ್ದವರು."

ಎಂಬ ಮಾತನ್ನು ಈ ಸಂದರ್ಭದಲ್ಲಿ ಒಪ್ಪಿಕೊಳ್ಳಬಹುದು.

ವಚನಕಾರರಲ್ಲಿ ರಾಜಕೀಯ ಪ್ರಾಮುಖ್ಯತೆ ಪಡೆಯದೆ ಜನಸಾಮಾನ್ಯರ ಆಚಾರ ವೈಯಕ್ತಿಕ ನಡವಳಿಕೆಗಳ ಸುಧಾರಣೆ, ಸಮಾಜದ ಸುಭಿಕ್ಷೆ ಪ್ರಧಾನ್ಯತೆ ಪಡೆಯಿತು. ಸರ್ವರೂ ಸಮಾನರೆಂದು ಸಹಬಾಳ್ವೆಯ ಸಮಾಜವನ್ನು ಕಟ್ಟ ಬಯಸಿದರು. ಯೋಗ್ಯತೆಯಿಂದ ಗೌರವ ದೊರೆಯುವುದೇ ವಿನಹ ಅಧಿಕಾರದಿಂದಲ್ಲ ಎಂಬುದನ್ನು ಜನಸಾಮಾನ್ಯರಿಗೆ ಅರಿವುಮಾಡಿಕೊಟ್ಟು ಜಾಗೃತಿ ಮೂಡಿಸಿದರು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನ ಸಾಹಿತ್ಯಕ್ಕೊಂದು ವಿಶಿಷ್ಟ ಸ್ಥಾನವಿದೆ. ಎಂದು ಡಾ. ಬಸವರಾಜ ಸಬರದ "ವಚನ ಚಳುವಳಿ ಒಂದು ಒಳನೋಟ" ಎಂಬ ತಮ್ಮ ಲೇಖನವೊಂದರಲ್ಲಿ ಅಭಿಪ್ರಾಯಪಡುತ್ತಾರೆ.

"ದಲಿತರು,ಶೋಷಿತರು – ಕೆಳವರ್ಗದವರು ಮೊದಲ ಬಾರಿಗೆ ಸಾಹಿತ್ಯದ ಮುಖಾಂತರ ಮಾತನಾಡಿದ್ದು ಇದೇ ಸಂದರ್ಭಲ್ಲಿ, ಅರಮನೆಗಳಿಂದ ಹೊರಬಂದು, ರಾಜಾಶ್ರಯದಿಂದ ದೂರವಾಗಿ, ಪಂಡಿತರ ಕಪಿಮುಷ್ಠಿಯಿಂದ ಪಾರಾಗಿ ಬಂದ ಕನ್ನಡ ಸಾಹಿತ್ಯ ಸಹಜವಾಗಿ ಉಸಿರಾಡಿದ್ದು ನೆಲದ ಮಾತಿನಲ್ಲಿ ನಳ-ನಳಸಿದ್ದು ವಚನಾಕಾರರಲ್ಲಿ ಮಾತ್ರ. ಜಾತಿ-ಮತ ಪಂಥಗಳನ್ನು ಬಿಟ್ಟು ದೇಶ, ಭಾಷೆ-ವಯಸ್ಸುಗಳ ಅಂತರವನ್ನು ಮರೆತು, ಮೇಲು-ಕೀಳೆಂಬ ತಾರತಮ್ಯವನ್ನಳಿದು, ಸಾಮಾನ್ಯ ಜನತೆ ಮೊದಲ ಬಾರಿಗೆ ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿ

ಕೊಂಡದ್ದು ಸಾರ್ವಕಾಲಿಕ ಮೌಲ್ಯದ ಸಾಹಿತ್ಯವನ್ನು ಕೊಟ್ಟದ್ದು ಗಮನಿಸಬೇಕಾದ ಸಂಗತಿಗಳು. " ಎನ್ನುವ ಡಾ॥ಬಸವರಾಜ ಸಬರದರವರು ಇನ್ನು ಮುಂದುವರೆದು, "ರಾಜಾಶ್ರಯದಲ್ಲಿದ್ದ ಹಿಂದಿನ ಕವಿಗಳು ರಾಜರನ್ನೇ ಹಾಡಿ ಹೋಗಳುತ್ತಿದ್ದ ಮೊದಲಿನ ಸಾಹಿತ್ಯಕ್ಕಿಂತ ಪೂರ್ಣ ಭಿನ್ನ ವಾಗಿ ಸಾಮಾನ್ಯನ ನೋವು ನಲಿವುಗಳಿಗೆ ನಾಲಿಗೆಯಾದ್ದು ದುಡಿವ ವರ್ಗದ ಜನರ ಮೊದಲ ದನಿಯಾಗಿ ಮೂಡಿದ್ದು ವಚನಸಾಹಿತ್ಯದ ಜನಪರ ನಿಲುವನ್ನು ಸ್ಪಷ್ಟಪಡಿಸುತ್ತದೆ. ವಚನಕಾರರು ಸಾಹಿತ್ಯದ ವಸ್ತುವನ್ನು ಬದಲಾಯಿಸುವುದರ ಮೂಲಕ ಅದರ ಪ್ರಕಾರವನ್ನೂ ಬದಲಾಯಿಸಿ ವಚನ ದಂತಹ ಹೊಸದಾದ ವಿಶಿಷ್ಟವಾದ ಪ್ರಕಾರವನ್ನು ಪರಿಚಯಿಸುತ್ತಾ, ಸಾಹಿತ್ಯ ಚರಿತ್ರೆಗೆ ಹೊಸದಿಕ್ಕು ಮೂಡಿಸಿದರು"[11] ಎನ್ನುತ್ತಾರೆ.

ಹೀಗೆ ವಚನಕಾರರಿಗೆ ರಾಜತ್ವ ಕುರಿತು ತಮ್ಮದೇ ಆದ ವಿಶಿಷ್ಟ ದನಿಯೊಂದು ಇರು ವುದು ಮಹತ್ವದ ವಿಷಯ. ಆಳವಾದ ರಾಜಕೀಯ ಸಂದರ್ಭಲ್ಲಿ ತಮ್ಮ ವ್ಯಕ್ತಿ ವಿಶಿಷ್ಟತೆಯನ್ನು ಉಳಿಸಿಕೊಂಡಿರುವುದು ವಚನಕಾರರ ವಿಶಿಷ್ಟತೆ ಎನ್ನಬಹುದು.

**ರಾಜತ್ವದ ನಿರಾಕರಣೆ ಹಾಗು ಮಾನವೀಯ ನೆಲೆಯಲ್ಲಿ ಒಡಮೂಡಿದ ರಾಜಕೀಯ ಜಾಗೃತಿ :-**

ರಾಜನೆಂದರೆ ವಿವೇಕವುಳ್ಳ ಸೂಕ್ಷ್ಮಗ್ರಾಹಿಯಾದ, ಚಾತುರ್ಯವುಳ್ಳ, ವ್ಯವಹಾರ ಕೌಶ ಲ್ಯವುಳ್ಳ, ಉಪಾಯಗಾರನಾದ, ತಂತ್ರನಡೆಸುವ, ಕೇವಲ ಅನುಕೂಲಕ್ಕೆ ಗಮನಹರಿಸುವ, ಸಂದರ್ಭಾನುಸಾರಿಯಾಗಿ ನಡೆವ, ಪ್ರಜಾಶಾಂತಿಯ ಆಡಳಿತದಲ್ಲಿ ನಿರತನಾದ ಎಂಬ ಗುಣವುಳ್ಳ ವನು ಎಂದು ಪರಿಗಣಿಸಬಹುದು.

ರಾಜಕೀಯವನ್ನು (Politics) Academic discipline that explores the relationship between individuals and society and between markets and the state. [12]

(ಇಂಗ್ಲೀಷ್ ಅನುವಾದ) ರಾಜನಾದವನು ತನ್ನ ರಾಜ್ಯದೊಳಗಿನ ಉದ್ದೇಶಿತ ರಾಜಕೀಯ ವ್ಯವ ಹಾರದಲ್ಲಿ ವ್ಯಕ್ತಿಗಳ ಹಾಗೂ ಸಮಾಜದ ನಡುವೆ ಶಿಸ್ತುಬದ್ಧ ಸಂಬಂಧವನ್ನು ಹೊರಮೂಡಿಸ ಬೇಕು. ಎಂದು ಹೇಳಿರುವಲ್ಲಿ ಆದರ್ಶ ರಾಜ್ಯದ ಕಲ್ಪನೆಯಿದೆ. ಒಟ್ಟಿನಲ್ಲಿ ರಾಜ ಹಾಗೂ ಪ್ರಜೆಗಳ ನಡುವಿನ ಸಾಮರಸ್ಯದಿಂದ ರಾಜ್ಯದ ರಕ್ಷಣೆಯಾಗುತ್ತದೆಂಬುದು ಸರ್ವಕಾಲಕ್ಕೂ ಸತ್ಯವಾದ ಮಾತಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ರಾಜನೀತಿಯು ಬಹಳ ಕಟ್ಟುನಿಟ್ಟಾಗಿದ್ದು ಪ್ರಜಾಪ್ರಭುತ್ವ ವಿರಲಿಲ್ಲ, ರಾಜನೇ, ಸರ್ವಾಧಿಕಾರಿಯಾಗಿದ್ದು ಭಯದ ವಾತಾವರಣವಿತ್ತು, ರಾಜಕೀಯದಲ್ಲಿ ನಿರತನಾದ ರಾಜನಿಗೂ ಒಟ್ಟಾರೆ ವಚನಕಾರರು ಪ್ರತಿಪಾದಿಸುವ ತಾತ್ವಿಕ ರಾಜಕೀಯ ನಿಲುವು ಗಳ ನಡುವೆ ಅಪಾರ ಅಂತರವನ್ನಿಲ್ಲಿ ಗುರುತಿಸಬಹುದು. ರಾಜನು ವಚನಕಾರರ ಎಲ್ಲಾ ತತ್ವಗಳ ಸಾಕಾರ ಸ್ವರೂಪಗಳಿಗೆ ವಿರೋಧವಾದ ಗುಣಸ್ವಭಾವಗಳನ್ನು ಉಳ್ಳವನಾಗಿದ್ದನು. ಆ ಭಯದ ವಾತಾವಾರಣದಲ್ಲೇ ರಾಜತ್ವವನ್ನು ನಿರಾಕರಿಸುವ ಹಾಗೂ ಖಂಡಿಸುವ ಮಟ್ಟಿಗೆ ವಚನ ಕಾರ್ತಿಯರು ಚಿಂತನೆ ನಡೆಸಿ ಮಾನವಧರ್ಮದಲ್ಲಿ ಕೆಟ್ಟ ರಾಜಕೀಯಕ್ಕೆ ಅವಕಾಶ ಇರುವುದಿಲ್ಲ ವೆಂದು ಸಾರುವ ಸಮಾಜವಾದಿಗಳಂತೆ ಕಂಡು ಬಂದರು.

## ಅಡಿಟಿಪ್ಪಣಿಗಳು

1. ಬಸವಣ್ಣನವರ ವಚನಗಳು : ಡಾ|| ಆರ್. ಸಿ. ಹಿರೇಮಠ - ಪುಟ 71, ವಚನ - 158
2. ಬಸವಣ್ಣನವರ ವಚನಗಳು : ಡಾ|| ಆರ್. ಸಿ. ಹಿರೇಮಠ - ಪುಟ 82, ವಚನ - 192
3. ಅಕ್ಕನ ವಚನಗಳು : ಸಂ. ಡಾ|| ಎಲ್. ಬಸವರಾಜು - ಪುಟ 73, ವಚನ - 105
4. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 134, ವಚನ - 9
5. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 143, ವಚನ - 35
6. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 194, ವಚನ -2 9
7. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 207, ವಚನ - 77
8. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 220, ವಚನ - 9
9. ಶಿವಶರಣೆಯರ ವಚನ ಸಂಪುಟ : ಸಂ. ಡಾ|| ವೀರಣ್ಣರಾಜೂರ - ಪುಟ 403, ವಚನ - 79
10. ವಚನ ಸಾಹಿತ್ಯ : ಡಾ || ಎಂ. ಚಿದಾನಂದ ಮೂರ್ತಿ - ಪುಟ 21
11. ಸಾಹಿತ್ಯ ವಿಮರ್ಶೆ - 1986 : ಸಂ. ಶಿವರಾಮು ಕಾಡನಕುಪ್ಪೆ - ಪುಟ 113, 114
12. Britanica Ready Reterence Encyclopedia Vol.8, Pg. 36

# ಅಧ್ಯಾಯ – 6

## ವಚನಕಾರ್ತಿಯರ ಕೌಟುಂಬಿಕ ಸ್ವರೂಪದ ಬಗೆಗಿನ ಪ್ರತಿರೋಧದ ನೆಲೆಗಳು

ಸಮಾಜವನ್ನು ಕುರಿತು ಚಿಂತಿಸುವಾಗ ಸಂಸಾರದ ಸ್ವರೂಪ ಬಹುಮುಖ್ಯವಾದ ಸ್ಥಾನವನ್ನು ಪಡೆಯುತ್ತದೆ. ಏಕೆಂದರೆ ಸಂಸಾರದಿಂದ ಏರ್ಪಡುವ ಸಂಬಂಧ, ವಾತಾರವರಣ, ನಡವಳಿಕೆಗಳು ಬಹು ಮಟ್ಟಿಗೆ ವ್ಯಕ್ತಿಯ ವ್ಯಕ್ತಿತ್ವವನ್ನು ಒಂದು ಗೊತ್ತುಪಡಿಸದ ನಿಯಮಾನುಸಾರ ನಿಯಂತ್ರಿಸುತ್ತಿರುತ್ತದೆ. ಒಂದು ರೀತಿಯಲ್ಲಿ ಸಂಸಾರಕ್ಕೆ ಸೇರಿದ ವ್ಯಕ್ತಿ ತನ್ನ ಸಂಸಾರದ ಒಳಿತನ್ನು ಕಾಯ್ದುಕೊಳ್ಳಲು ಬದ್ಧನಾಗಿರಬೇಕಾಗುತ್ತದೆ. ಈ ಮಾತನ್ನು ವಿವರಿಸುತ್ತಾ ಥಾಯರ್ ಹೀಗೆ ಹೇಳುತ್ತಾನೆ.

As are families, so in society – If well ordered, well instructed and well governed, they are the spring from which go forth the streams of national greatness and prosperity of civil order and public happiness[1]

ಕುಟುಂಬವೊಂದರ ಬೆಳವಣಿಗೆಯ ಮೇರೆಗೆ ಸಮಾಜ ರೂಪಗೊಂಡಿರುತ್ತದೆ. ಹೀಗೆ ಕುಟುಂಬವು ಒಳ್ಳೆಯ ಆಲೋಚನೆಯನ್ನು ಕ್ರಿಯೆಗಳನ್ನು, ಮಾರ್ಗದರ್ಶನವನ್ನು ನೀಡಿದರೆ, ಅದು ವಸಂತನ ಆಗಮನವನ್ನು ಸೂಚಿಸುವಂತೆ, ರಾಷ್ಟ್ರದ ಉನ್ನತಿಗೆ ಹಾಗೂ ಬೆಳವಣಿಗೆಗೆ ಕಾರಣವಾಗಿ ಸಮಾಜಿಕ ನ್ಯಾಯ ಮತ್ತು ಸಾರ್ವಜನಿಕರ ಕುಶಲತೆಯನ್ನು ಕಾಯುತ್ತದೆ.

ಹೀಗೆ ತನ್ನ ಕುಟುಂಬ ವ್ಯವಸ್ಥೆಯಲ್ಲಿ ತಾನು ನಿರ್ವಹಿಸಿದ ಕಾರ್ಯದಿಂದ ಯಶಸ್ಸು ಹೊಂದಿ ನಡೆಯುವಾತನಿಗೆ ಒಂದು ಬಗೆಯ ಮಾನ್ಯತೆ ದೊರಕುತ್ತದೆ. ಆ ಕಾರಣ ಕುಟುಂಬ ಸಮಾಜದ ಕಿರಿಯ ಘಟಕವಾಗಿದ್ದರೂ ಅತಿ ಮುಖ್ಯವೆನಿಸಿದೆ.

ಕುಟುಂಬದೊಂದಿಗಿನ ಹೆಣ್ಣಿನ ಸಂಬಂಧವೂ ಕೂಡ ಅನೇಕ ಕ್ರಮಗಳಿಗೆ ಒಳಪಟ್ಟಿತ್ತು. ಕೌಟುಂಬಿಕ ಚೌಕಟ್ಟಿನಲ್ಲಿ ಹೆಣ್ಣಿನ ಸ್ಥಾನ ಗಂಡಿಗೆ ಹೆಣ್ಣು ಅಧೀನಳೆಂಬಂತೆಯೇ ಕಂಡುಬರುತ್ತದೆ. ಅವಮಾನ ಹಾಗೂ ಶೋಷಣೆಗೆ ಗುರುಪಡಿಸಿ ನಿಕೃಷ್ಟವಾಗಿ ಕಾಣುತ್ತಿದ್ದರ ಬಗೆಗೆ ನಮ್ಮ ಧರ್ಮಶಾಸ್ತ್ರಗಳಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ.

ಈ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣನ್ನು ವೈವಾಹಿಕ ಬಂಧನಕ್ಕೊಳಪಡಿಸಿ ಅವಳ ಸಾಮಾಜಿಕ ಹಾಗೂ ಬೌದ್ಧಿಕ ಬೆಳವಣಿಗೆಯನ್ನು ಚಿವುಟಿ ಹಾಕಲಾಯಿತು. ಕೌಟುಂಬಿಕ ಚಟುವಟಿಕೆಗಳ ಗಡಿಯನ್ನು ಹಾಕಿ, ಭೋಗ ಸಾಮಗ್ರಿಯಂತೆ ಬಳಸಿಕೊಂಡು ಕಟ್ಟುನಿಟ್ಟಾದ ನಿಯಮಗಳನ್ನು ಅವಳ ಮೇಲೆ ಹೇರಲಾಯಿತು.

ಹೆಣ್ಣಿನ ಪರಿಸ್ಥಿತಿ ಹೀಗಿದ್ದ ಸಂದರ್ಭದಲ್ಲಿ ವಚನಕಾರರ ಸರ್ವಸಮಾನತೆಯ ತತ್ವದಿಂದಾಗಿ ಈ ಹಿಂದೆ ಅವಳಿಗೆ ಅಂಟಿದ್ದ ಅನಿಷ್ಟಗಳ ವಿರುದ್ಧ, ಆಚರಣೆಯ ಹಾಗೂ ನಂಬಿಕಗಳ ವಿರುದ್ಧ ಪ್ರತಿಭಟನಾತ್ಮಕ ನಿಲುವನ್ನು ತಳೆದಳು. ತನ್ನನ್ನು ಆವರಿಸಿದ್ದ ಬಂಧನದಿಂದ ಮುಕ್ತಿಹೊಂದಿ ಅದಕ್ಕೆ ಪ್ರತಿಯಾಗಿ ಹೊಸ ಕುಟುಂಬದ ಸ್ವರೂಪವನ್ನು ತನ್ನ ಆಶಯದ ಹಿನ್ನೆಲೆಯಲ್ಲಿ ಕಂಡು ಕೊಂಡಳು.

ಹೀಗೆ ಕೌಟುಂಬಿಕ ಸಂದರ್ಭದಲ್ಲಿ ವಚನಾರ್ತಿಯರು ಕುಟುಂಬ ವ್ಯವಸ್ಥೆಯ ಬಗೆಗೆ ತಳೆದ ಪ್ರತಿರೋಧದ ನೆಲೆಗಳನ್ನು ಅವರ ವಚನಗಳ ಮೂಲಕ ಗುರುತಿಸುವುದನ್ನಿಲ್ಲಿ ಕಾಣಬಹುದು.

## ವಚನಕಾರ್ತಿಯರಲ್ಲಿ ಕೌಟುಂಬಿಕ ಸ್ವರೂಪದ ನೆಲೆಗಳು

ಹನ್ನೆರಡನೆಯ ಶತಮಾನದಲ್ಲಿ ವಚನಕಾರ್ತಿಯರು ವೀರಶೈವ ಚಳುವಳಿಯ ಒಂದು ಭಾಗವಾಗಿದ್ದರು. ಈ ಚಳುವಳಿಯಲ್ಲಿ ಪಾಲ್ಗೊಳ್ಳುವ ಮೂಲಕ, ತಾವು ಆಶಿಸಿದ ಮಾನವೀಯ ಸಂಬಂಧಗಳನ್ನು ರೂಪಿಸಿಕೊಂಡರು.

ಈ ಮೊದಲು ಸ್ತ್ರೀಯರನ್ನು ಕುಟುಂಬವೆಂಬ ಸಂಕೋಲೆಯಲ್ಲಿ ಬಂಧಿಸಿರಿಸಲಾಗಿತ್ತು. ಮಾತೃ, ಪತ್ನಿ ಎಂಬ ಕೌಟುಂಬಿಕ ಭಾವನಾವಲಯಕ್ಕೆ ಅವಳನ್ನು ಸೀಮಿತಗೊಳಿಸಿದ್ದರು. ಸ್ತ್ರೀಯರೂ ಈ ಬಗೆಗೆ ಪ್ರಶ್ನಿಸುವುದಾಗಲೀ, ವಿರೋಧವನ್ನಾಗಲಿ ವ್ಯಕ್ತಪಡಿಸದೆ ತಮ್ಮ ಅಂತರಂಗದಲ್ಲೆ ನೋವನ್ನು ಹಿಡಿದಿಟ್ಟುಕೊಂಡು, ಈ ಎಲ್ಲಾ ನಿಯಮಾವಳಿಗಳು ಹೆಣ್ಣಿಗೆ ಸಹಜವೆಂಬಂತೆ ಒಪ್ಪಿ ನಡೆಯುತ್ತಿದ್ದರು. ಅವಳ ಹಿತದ ಹೆಸರಿನಲ್ಲಿ ಕುಟುಂಬದಲ್ಲೇ ದೈಹಿಕ ಹಾಗೂ ಮಾನಸಿಕ ಹಿಂಸೆಗಳಾಗುತ್ತಿತ್ತು. ಅವಳ ಪ್ರಾಕೃತಿಕ ಗುಣಧರ್ಮಗಳನ್ನು ಗಮನದಲ್ಲಿರಿಸಿಕೊಂಡು ಸ್ತ್ರೀ-ಪುರುಷರ ಸ್ಥಾನಮಾನವನ್ನು ಬೇರ್ಪಡಿಸಲಾಗಿ, ಪುರುಷನ ಅನಂತರದವಳೆಂಬ ಭಾವನೆ ಬೆಳೆದಿತ್ತು. ಅವಳಿಗೆ ಯಾವುದೇ ಬಗೆ ಸ್ವಾತಂತ್ರ್ಯವನ್ನು ನೀಡದೆ, ಅವಳ ಹುಟ್ಟನ್ನೇ ಅಶುಭವೆಂಬಂತೆ ನೋಡಲಾಗುತ್ತಿತ್ತು.

ಹೀಗೆ ಸಂಪ್ರದಾಯದ ಕಪಿಮುಷ್ಟಿಯಲ್ಲಿ ಬಂಧಿತಳಾಗಿದ್ದ ಸ್ತ್ರೀಯರನ್ನು ವಚನಚಳುವಳಿ ಮುಕ್ತಗೊಳಿಸುವ ದಿಶೆಯಲ್ಲಿ ಕಾರ್ಯಪ್ರವೃತ್ತವಾಯಿತು. ಸಾಧನೆಗೆ ಯಾರಾದರೇನೆಂದು ಬೆಂಬಲ ನೀಡಿ, ಸಂಸಾರದ ಪರಿವಲಯದಲ್ಲಿ ಇದ್ದುಕೊಂಡೆ ಆಧ್ಯಾತ್ಮ, ಸಾಹಿತ್ಯ, ಸಾಂಸ್ಕೃತಿಕ, ಆರ್ಥಿಕ ಕ್ಷೇತ್ರಗಳಲ್ಲಿ ತೊಡಗಬಹುದೆಂಬುದನ್ನು ತೋರಿಸಿಕೊಟ್ಟರು.

ಸ್ತ್ರೀಯರು ಆವರೆಗೆ ನೊಂದಿದ್ದರೂ ಆ ನೋವಿನಿಂದಲೇ ಪಡೆದ ವಿಶಿಷ್ಟ ಮನಃಸ್ಥಿತಿಯ ವ್ಯಕ್ತಿತ್ವದಿಂದಲೇ ವಚನಗಳ ರಚನೆ ಮಾಡಿದರು. ಆದರೆ ಬದಲಾದ ಸಾಮಾಜಿಕ ಸಂದರ್ಭಕ್ಕೆ ಹೊಂದಿಕೊಳ್ಳುವ ನಿಟ್ಟಿನಲ್ಲಿಯೇ ಈ ಹಿಂದೆ ಅನುಭವಿಸಿದ್ದ ಬಹುಬಗೆಯ ಸಂಕೀರ್ಣಯುಕ್ತ ಸಂಕೋಲೆಗಳ ಪರಿಣಾಮದಿಂದ ಅವರ ಪ್ರತಿಕ್ರಿಯೆ ಹಾಗೂ ಸ್ಪಂದನಗಳು ಕೆಲಮಟ್ಟಿಗೆ ಬೇರೆಯಾಗಿಯೇ ತೋರುತ್ತವೆ.

ಈ ಹಿಂದೆ ಹೆಣ್ಣಿನ ಈ ಎಲ್ಲಾ ಬಗೆಯ ಭಾಗವಹಿಸುವಿಕೆಯನ್ನು ಪಾಪ ಹಾಗೂ ಅನಿಷ್ಟವೆಂಬಂತೆ ಕಾಣಲಾಗುತ್ತಿದ್ದ ನಂಬಿಕೆಗಳನ್ನು ನಿರಾಕರಿಸಿದರು. ಪ್ರತಿಯೊಂದು ಕ್ಷೇತ್ರದಲ್ಲೂ ಸಮಾನತೆಯನ್ನು ಅಪೇಕ್ಷಿಸಿ, ಆತ್ಮವಿಶ್ವಾಸ, ನಿಷ್ಠೆ, ಸ್ಥೈರ್ಯಗಳಿಂದ ಸ್ವತಂತ್ರ ವ್ಯಕ್ತಿತ್ವದ ಬೆಳವಣಿಗೆಯನ್ನು ಕಂಡುಕೊಳ್ಳಲು ಹಂಬಲಿಸಿದರು.

ವಚನಕಾರರು ಸ್ತ್ರೀಯರಲ್ಲಿ ಮೂಡಿಸಿದ ಜಾಗೃತಿಯಿಂದಾಗಿ ಹೆಣ್ಣುಮಾಯೆ, ಕೀಳು, ಚಂಚಲೆ, ಕುಟುಂಬದ ಸ್ವತ್ತು ಭೋಗದ ವಸ್ತು ಕುಟಿಲ ಪ್ರವೃತ್ತಿಯುಳ್ಳವಳೆಂಬ ಭಾವನೆ ಅಳಿದು, ಸ್ತ್ರೀಯೂ ಸೃಜನಶೀಲತೆಯುಳ್ಳ ಜೀವಿಯೆಂದು ಅವಳ ಬದುಕಿಗೊಂದು ಬಗೆಯ ಜೀವಂತಿಕೆಯನ್ನು ತಂದುಕೊಟ್ಟರು.

ವಚನಕಾರ್ತಿಯರು ಬಹುವಾಗಿ ಜೀವನದ ಬಗೆಗೆ ಸಕಾರಾತ್ಮಕ ನಿಲುವುಳ್ಳವರಾಗಿದ್ದರು. ಅಕ್ಕಮಹಾದೇವಿ, ಬೋಂತಾದೇವಿ, ಗೊಗ್ಗವ್ವೆ ಮೊದಲಾದವರನ್ನು ಬಿಟ್ಟರೆ ಬಹುಸಂಖ್ಯೆಯ ಶರಣೆಯರು ಸಂಸಾರಿಗಳಾಗಿದ್ದರು. ದಾಂಪತ್ಯ ಧರ್ಮ ಸಾಧನೆಯ ಮಾರ್ಗಕ್ಕೆ ತೊಡಕಾಗಿ ಅವರಿಗೆ ಕಾಣಬರಲಿಲ್ಲ. ನೆಮ್ಮದಿಯ ದಾಂಪತ್ಯ ಆಧ್ಯಾತ್ಮ ಸಾಧನೆಗೆ ಪ್ರೇರಕ ಹಾಗೂ ಪೂರಕವೆಂದೇ ಅವರು ಭಾವಿಸಿದ್ದರು. ಆದರೆ ತಪ್ಪು ನಡೆದಾಗ ಗಂಡನೇ ಆಗಲಿ ಅವನಿಗ ಬುದ್ದಿಹೇಳಿ ಉಪದೇಶಿಸುವಲ್ಲಿ ವಚನಕಾರ್ತಿಯರು ಹಿಂಜರಿಯಲಿಲ್ಲ. ಹೀಗೆ ವಿಚಾರ ಭಿನ್ನತೆಯಂತಹ ವಿಷಮ ಪರಿಸ್ಥಿತಿಯನ್ನು ತನ್ನ ದಿಟ್ಟತನದಿಂದ ಹೆದರಿಸುವುಲ್ಲಿ ವಚನ ಚಳುವಳಿಯ ಉದ್ದೇಶಿತ ಆಶಯಗಳು ಸ್ಪಷ್ಟವಾಗಿ ಈಡೇರಿರುವುದು ಕಂಡು ಬರುತ್ತದೆ.

"ಒಟ್ಟಿನಲ್ಲಿ ವೀರಶೈವ ಧರ್ಮ, ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಸ್ತರಗಳಲ್ಲಿ ಪುರಷನಷ್ಟೇ ಸ್ತ್ರೀಗೆ ಅವಕಾಶನೀಡಿ, ಉಭಯ ಪ್ರಧಾನ ಕುಟುಂಬದ ಪದ್ಧತಿಯನ್ನು ಅನುಮೋದಿಸುತ್ತಾ, ಅವರು ವೈಚಾರಿಕ ದಂಪತಿಗಳಾಗಿ ಶರಣಪತಿ – ಲಿಂಗಪತಿಭಾವದಿಂದ ಬದುಕುವುದನ್ನು ಬಯಸುತ್ತದೆ."[2] ಎಂದು ಡಾ॥ ಎಂ ಎಂ ಕಲುಬುರ್ಗಿಯವರು ಅಭಿಪ್ರಾಯ ಪಟ್ಟಿದ್ದಾರೆ. ಆದರೂ ಪತಿ ತಾನು ಹೆಚ್ಚಿನವನೆಂದು ಇಲ್ಲಸಲ್ಲದ ಕಟ್ಟುಪಾಡುಗಳನ್ನೂ ನಿಯಮಗಳನ್ನೂ ಅವಳ ಮೇಲೆ ಹೇರಿದರೆ ಒಪ್ಪದೆ ಆ ನಿಯಮಗಳನ್ನು ಮುರಿಯುವರಾಗಿದ್ದರು.

**ವಚನಕಾರ್ತಿಯರಲ್ಲಿ ಕೌಟುಂಬಿಕ ಪರಿವಲಯದ ಒತ್ತಾಯಗಳ ನಿರಾಕರಣೆಯ ಸ್ವರೂಪ:–**

**ಅಕ್ಕಮಹಾದೇವಿ**

ಹನ್ನೆರಡನೇ ಶತಮಾನದ ಚಳುವಳಿ ಹಾಗೂ ಚಿಂತನೆ, ಆ ಕಾಲದ ಸ್ತ್ರೀಯರ ಸಾಧನೆಯ ದೃಷ್ಟಿಯಿಂದ ಅಪೂರ್ವವಾದುದು. ಅದರಲ್ಲೂ ಅಕ್ಕಮಹಾದೇವಿಯ ಆಧ್ಯಾತ್ಮಿಕ, ಪಾರಮಾರ್ಥಿಕ ಚಿಂತನೆ, ಆಧ್ಯಾತ್ಮಿಕತೆ, ವಿರಕ್ತಿ ಆತ್ಮವಿಶ್ವಾಸಗಳ ವಿಲಕ್ಷಣವಾದ ವ್ಯಕ್ತಿತ್ವ ಬೆರಗುಗೊಳಿಸುತ್ತದೆ.

ಅಂದಿನ ಸಾಂಪ್ರದಾಯಿಕ ವಿಚಾರ ಧೋರಣೆಯಲ್ಲಿ – ಸಮಾಜದಲ್ಲಿ ಹೆಣ್ಣು ವಿವಾಹದಿಂದ ಬೇರ್ಪಡುವುದು ಸಾಹಸದ ವಿಚಾರವೇ ಆಗಿತ್ತು. ಮದುವೆಯಿಂದ ಹೆಣ್ಣಿಗೆ ಮೋಕ್ಷ ಎಂಬ ಧರ್ಮಸೂತ್ರವನ್ನು ಸಮಾಜ ಒಪ್ಪಿ ನಡೆಯುತ್ತಿತ್ತು. ಆ ಸಂದರ್ಭಲ್ಲಿ ಅಕ್ಕಮಹಾದೇವಿ ಕೈಗೊಂಡ ನಿರ್ಧಾರ ಲೋಕರೂಢಿಗೆ ವಿರುದ್ಧವಾಗಿದ್ದು, ಪರಂಪರಾಗತ ವ್ಯವಸ್ಥೆಯ ವಿರುದ್ಧ ಬಂಡಾಯ ಮನೋಧರ್ಮವನ್ನು ಉಳ್ಳವಳಾಗಿ ಕಾಣಬರುತ್ತಾಳೆ.

ಹೀಗೆ ಯೌವನದ ಹೊಸ್ತಿಲಲ್ಲಿ ಸಿರಿವಂತಿಕೆಯನ್ನು ತೊರೆದು ಲೌಕಿಕ ದಾಂಪತ್ಯ ಜೀವನ ವನ್ನು ಬಿಟ್ಟು ಆಸೆಯನ್ನು ತ್ಯಜಿಸಿ, ಸಾಧಕಳಾಗಿ ವಿರಾಗಿಯಾದಳು. ಚೆನ್ನಮಲ್ಲಿಕಾರ್ಜುನನ್ನು ನಂಜಿ ಹಸಿವೆ, ಬಾಯರಿಗೆ, ನಿದ್ದೆಗಳೆಲ್ಲ ಅವಳಿಗೆ ಸಮಸ್ಯೆಯಾಗಿ ಪರಿಣಮಿಸಲಿಲ್ಲ. ಲೌಕಿಕ ಪತಿಯನ್ನು ಬಿಟ್ಟು ಅಲೌಕಿಕ ಪತಿಗಾಗಿ ಹಂಬಲಿಸಿದ ಅಕ್ಕಮಹಾದೇವಿಯು ತನ್ನ ಅಂತರಂಗದ ಜೊತೆಗೆ ಹೋರಾಡಬೇಕಾಯಿತು. ಅವಳಲ್ಲಿ ಲೌಕಿಕ ಬದುಕಿನ ಅಧೀನತೆಯಿಂದ ವಿಮುಕ್ತಿ ಹೊಂದಿದ್ದ ಸಂಸಾರದ ಬಗೆಗೆ ತಳೆದ ವೈರಾಗ್ಯ ಹಾಗೂ ವೈಚಾರಿಕ ಪರಿಪಕ್ವತೆ ಇತರ ಶಿವಶರಣೆಯರಿಗಿಂತ ಭಿನ್ನವಾಗಿದೆ.

ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ್ಯಾ
ಏವೆನಯ್ಯ ಏವೆನಯ್ಯ
ಅಂದಂದಿನ ದಂದುಗಕ್ಕೆ ಏವೆನಯ್ಯ ಏವೆನಯ್ಯ
ಬೆಂದೊಡಲ ಹೊರೆವುದಕ್ಕೆ ನಾನಾರೇ!
ಚೆನ್ನಮಲ್ಲಿಕಾರ್ಜುನ – ಕೊಲ್ಲುಕಾಯಿ ನಿಮ್ಮ ಧರ್ಮ॥[3]

ಅಕ್ಕನಿಗೆ ಸಂಸಾರವು ನಿಸ್ಸಾರವಾಗಿ ಅಂಗವಿಕಾರವನ್ನು ತಂದೊಡ್ಡಿ ಬೆಂಬಿಡದೆ ಕಾಡುವ ಭೂತವಾಗಿ ಪರಿಣಮಿಸಿದೆ. ಪ್ರತಿದಿನದ ಕಷ್ಟಕೋಟಲೆಯಿಂದ ಬೆಂದಿರುವುದಾಗಿ ಮನನೊಂದ ಚೆನ್ನಮಲ್ಲಿಕಾರ್ಜುನನಲ್ಲಿ ತನ್ನನ್ನು ಕಾಪಾಡಿಸಲಹು ಎಂದು ಮೊರೆಹೋಗುತ್ತಾಳೆ.

ಅಕ್ಕ ಕುಟುಂಬವು ನೀಡುವ ಪ್ರೇಮ ಹಾಗೂ ಲೈಂಗಿಕ ಸಂಬಂಧಗಳು ಮುಂದೆ ಬಂಧನ ವಾಗಿ ವಿಷಮ ಪರಿಸ್ಥಿತಿಗೆ ಕಾರಣವಾಗುತ್ತದೆಂದು ಕುಟುಂಬದ ಹಂಗನ್ನು ತೀವ್ರವಾಗಿ ತಿರಸ್ಕರಿಸು ತ್ತಾಳೆ.

ರತ್ನದ ಸಂಕೋಲೆಯಾದರೆ ತೊಡರಲ್ಲವೆ?
ಮುತ್ತಿನ ಬಲೆಯಾದರೆ ಬಂಧನವಲ್ಲವೆ?
ಚಿನ್ನದ ಕತ್ತಿಯಲ್ಲಿ ತಲೆಯ ಹೊಯ್ದರೆ ಸಾಯದಿಪ್ಪರೆ?
ಲೋಕದ ಭಜನೆಯ ಭಕ್ತಿಯಲ್ಲಿ ಸಿಲುಕಿದರೆ
ಜನನ ಮರಣ ಬಿಡುವುದೇ ಚೆನ್ನಮಲ್ಲಿಕಾರ್ಜುನ?[4]

ಅಕ್ಕ ಲೋಕದ ಸೌಂದರ್ಯಕ್ಕೆ ಮಾರುಹೋಗಿ, ಲೌಕಿಕ ಜೀವನದ ಬಗೆಗೆ ಆಕರ್ಷಿತರಾ ದರೆ ವ್ಯಕ್ತಿಯನ್ನು ಸಾಧನೆ ಮಾಡದಂತೆ ಕೊಲ್ಲುವ ವಾತಾವರಣವನ್ನು ಸೃಷ್ಟಿಸುತ್ತದೆ ಎಂದಿದ್ದಾಳೆ. ಆಗ ಮನುಷ್ಯರಾಗಿ ಹುಟ್ಟಿದ ಪ್ರಯೋಜನವಾದರೂ ಏನು? ಲೌಕಿಕದ ಜಂಜಾಟದಲ್ಲಿ ಸಿಲುಕಿ ದರೆ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲದೆ ಚೈತನ್ಯವಿಲ್ಲವಾಗಿ ಬದುಕಿದ್ದು ಸತ್ತಂತಾಗುತ್ತದೆ ಎಂದಿ ದ್ದಾಳೆ.

ಕುಟುಂಬದ ಸಂಬಂಧ ಕುರಿತ ಈ ಕೆಳಗಿನ ವಚನದಲ್ಲಿ ಅಕ್ಕ ವಿವಾಹದಿಂದ ಒದಗಿಬಂದ ಸಂಬಂಧಗಳ ಲಕ್ಷಣಗಳನ್ನು ಹಾಗೂ ವಿವಾಹವಾದ ಕಾರಣ ಹೆಣ್ಣೋರ್ವಳಿಗೆ ಬಂದೊದಗುವ ಸಂಕಷ್ಟಗಳ ವಿವರವನ್ನಿಲ್ಲಿ ಕೊಟ್ಟಿದ್ದಾಳೆ.

ಒಲ್ಲೆಗಂಡನ ಕೂಟ ಒಗತನವ
ಅಕ್ಕಟ ಗಂಡನ ಮನೆ ಬಿರಿಸಯ್ಯಯ್ಯೋ
ಒಡಕುಗಂಗಳದಲ್ಲಿ ನೀರಂಬಲಿಯನೀಡಿ
ಹೊಡದಳು ನಮ್ಮತ್ತೆ ಮೊರದಲ್ಲಿ
ಕಡುದುಃಖದಿಂದ ನಾ ಒಲೆಯ ಮುಂದೆ ಕುಳಿತರೆ
ಕೊಡಿತನದಿ ಬಂದು ಒದ್ದಳಯ್ಯಯ್ಯೋ
ನೆತ್ತಿಗೆಣ್ಣೆಯಿಲ್ಲದೆ ತಲೆ ಬತ್ತಿಗಟ್ಟಿತು
ವೃತ್ತ ಜವ್ವನ ಬಾಡಿ ಹೋದವಲ್ಲ
ಅತ್ತೆಯಾಸೆಯಿಲ್ಲ ಮಾವನ ಲೇಸಿಲ್ಲ
ಚಿತ್ತವಲ್ಲಭನಲ್ಲಿ ಗಣವಿಲ್ಲವಯ್ಯಯ್ಯೋ
ಹೇಳಿ ಕಳುಹುವೆ ನಾನವ್ವೆಗಳೂರಿಗೆ
ನಾಳೆ ಕರೆತರಿಸುವೆ ನಮ್ಮಯ್ಯಗಳ
ಕೇಳಯ್ಯ ಶ್ರೀಶೈಲ ಚೆನ್ನಮಲ್ಲಿಕಾರ್ಜುನ
ಬ್ಬಾಳ ಪಾಪಿಗಳಲ್ಲಿ ಕೊಟ್ಟರಯ್ಯಯ್ಯೋ [5]

ಸಂಸಾರದ ಗುಣಲಕ್ಷಣಗಳನ್ನು ಕುರಿತು Family; Basic unit consisting of person united by ties of marriage (affinity), blood consanguinity) or adaptation and usually representing a single household"[6] ಎಂದು ಹೇಳಲಾಗಿದೆ.

(ಇಂಗ್ಲೀಷ್ ಅನುವಾದ) ಒಬ್ಬ ವ್ಯಕ್ತಿಯು ಸಮಾನವಾಗಿ ಪರಸ್ಪರ ಪ್ರೀತಿ-ಗೌರವದಿಂದ ವೈವಾಹಿಕ ಜೀವನದಲ್ಲಿ ಆವೃತವಾಗಿ, ತನ್ನ ರಕ್ತಸಂಬಂಧಿಗಳೊಂದಿಗೆ ಒಂದೇ ಮನೆಯಲ್ಲಿ ವಾಸಿಸುವ ಸಮೂಹವನ್ನು ಕುಟುಂಬ ಎಂದು ಕರೆಯುತ್ತೇವೆ.

ಆದರೆ ಅಕ್ಕನಿಗೆ ಕುಟುಂಬವು ಮೇಲಿನ ಅಭಿಪ್ರಾಯವನ್ನು ತಂದುಕೊಡದೆ, ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲದೆ, ಹಿಂಸಾತ್ಮಕ ವಾತಾವರಣವನ್ನು ತಂದೊಡ್ಡಿದೆ. ಅಮಾನವೀಯವಾಗಿ ಸೊಸೆಯನ್ನು ನಡೆಸಿಕೊಳ್ಳಲಾಗಿರುವ ಚಿತ್ರಣವನ್ನು ಈ ವಚನ ಕಟ್ಟಿಕೊಟ್ಟು ಪ್ರೀತಿ-ಗೌರವಗಳಿಗೆ ಪಾತ್ರಳಾಗ ಬೇಕಿದ್ದವಳಿಗೆ ದೊರೆತ ಅಗೌರವದ ವಾಸ್ತವವನ್ನು ಹೇಳಲಾಗಿದೆ. ಆ ಕಾರಣ ಕುಟುಂಬದ ಕಟ್ಟುಪಾಡಿನಿಂದ ಹಾಗೂ ವಿವಾಹ ಬಂಧನವ ತೊರೆದು ಮುಕ್ತಳಾಗುವ ತೀವ್ರತೆಯಲ್ಲಿರುವುದನ್ನು ಕಾಣಬಹುದು.

ಗಂಡ, ಅತ್ತೆ, ಮಾವಂದಿರ ಹಿಂಸೆಯನ್ನು ಸಹಿಸದೆ ಕೊಟ್ಟ ಮನೆಯನ್ನು ತೊರೆದರೆ ಎಲ್ಲಿ ಸಮಾಜ ತನ್ನೆಡೆಗೆ ಬೆರಳು ಮಾಡಿ ತೋರುವುದೆಂಬ ಅಸಹಾಯಕ ಪರಿಸ್ಥಿತಿಯಲ್ಲಿ ಬದುಕ ಸಾಗಿಸುತ್ತಿರುವ ಈ ಶತಮಾನದ ಹೆಣ್ಣಿಗೂ ಅಕ್ಕನ ಈ ಬಗೆಯ ದಿಟ್ಟತನ ಬಾರದಿರುವುದು ನಮ್ಮ ಸಮಾಜ ಈಗಲೂ ಅಂಧಕಾರದ ಸಂಕೋಲೆಯಲ್ಲಿರುವುದಕ್ಕೆ ಸಾಕ್ಷಿಯಾಗಿದೆ. ವಿವಾಹ ಜೀವನದಲ್ಲಿ ಪಟ್ಟ

ಕಷ್ಟಕಾರ್ಪಣ್ಯ ಹಾಗೂ ಪ್ರಾಪಂಚಿಕತೆಯಲ್ಲಿನ ಹೆಣ್ಣಿನ ದಮನಕಾರಿ ಅಸ್ತಿತ್ವವನ್ನು ಕಂಡು ಅಕ್ಕಮಹಾದೇವಿ ಜಾಗೃತಳಾಗಿರುವುದು ಇಂದಿಗೂ ಆದರ್ಶಪ್ರಾಯವಾಗಿದೆ.

ಎರದ ಮೆಳೆನಂತೆ ಪರಗಂಡರೆನಗವ್ವಾ
ಸೋಂಕಲಮ್ಮೆ ಸುಳಿಯಲಮೆ,
ನಂಬಿನಚ್ಚಿ ಮಾತಾಡಲಮ್ಮೆನವ್ವಾ
ಮಲ್ಲಿಕಾರ್ಜುನನಲ್ಲದ ಗಂಡರಿಗೆ
ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ॥[7]

ಅಕ್ಕನ ಉತ್ಕಟವಾದ ಭಕ್ತಿಯು ಪ್ರೇಮವಾಗಿ ತನ್ಮಯತೆಯಿಂದ ತನ್ನ ಮನದೊಡೆಯ ಚೆನ್ನಮಲ್ಲಿಕಾರ್ಜುನನೆಂದುಸಾರಿದ್ದಾಳೆ. ಮದುವೆಯ ಸಾಂಪ್ರದಾಯಿಕ ರೀತಿ ರಿವಾಜುಗಳನ್ನು ಧಿಕ್ಕರಿಸಿ, ಆತ್ಮಸ್ಥೈರ್ಯಹೊಂದಿ ಚೆನ್ನಮಲ್ಲಿಕಾರ್ಜುನನು ಎನ್ನಪತಿ, ಆತ್ಮ ಸಂಗಾತಿ ಎಂದು ಅಚಲವಾಗಿ ನುಡಿಯುತ್ತಾಳೆ.

ಲೋಕದ ಗಂಡನಿಗೂ ಎನಗೂ ಸಂಬಂಧವಿಲ್ಲವೆಂದು, ಲೌಕಿಕ ಗಂಡನಸಂಗ ಮುಳ್ಳಿನಂತೆ ಎಂದು, ಆ ನೋವ ಸಹಿಸಲಾಗದೆಂದು ಈ ವರೆಗೂ ಪತಿಯಾದವನಿಗೆ ಸಲ್ಲುತ್ತಿದ್ದ ಗೌರವಕ್ಕೆ ವ್ಯತಿರಿಕ್ತ ವಾಗಿ ನುಡಿದಿದ್ದಾಳೆ. ಇಲ್ಲಿ ಅಕ್ಕನ ಸಹಜ ಹಾಗೂ ಸ್ವತಂತ್ರ್ಯ ಮನಃಸ್ಥಿತಿಯು ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡಿದೆ.

ಸಂಪ್ರದಾಯದಿಂದ ಬಂದ ವಿವಾಹದ ವಿಧಿಗಳನ್ನು ಧಿಕ್ಕರಿಸಿ ಪ್ರಕೃತಿದತ್ತವಾದ ವಸ್ತುಗಳನ್ನು ಕೂಡಿ, ಅಮೂರ್ತತೆಯ ಸಾಕಾರಮೂರ್ತಿಯಾದ ಶಿವನನ್ನು ಪತಿಯೆಂದು ಅವನೊಡನೆ ಬಿಡದೆ ಬಾಳವೆ ಎಂದಿದ್ದಾಳೆ.

ಜಲದ ಮಂಟಪದ ಮೇಲೆ
ಉರಿಯ ಚಪ್ಪರವನಿಕ್ಕಿ
ಆಲಿಕಲ್ಲ ಹಸೆಯ ಹಾಸಿ, ಬಾಸಿಗವಕಟ್ಟಿ
ಕಾಲಿಲ್ಲದ ಹೆಂಡತಿಗೆ
ತಲೆಯಿಲ್ಲದ ಗಂಡ ಬಂದು ಮುಟ್ಟಿಬನು ನೋಡಾ॥
ಎಂದೆಂದೂ ಬಿಡದ ಬಾಳವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನಯ್ಯನಿಗೆ॥[8]

ಅಕ್ಕನಿಗೆ ತನ್ನ ನಿರ್ಧಾರಗಳ ಬಗೆಗೆ ಸ್ವಲ್ಪವೂ ಮುಜುಗರವಾಗಲಿ, ಭವಯವಾಗಲಿ ಇಲ್ಲದಿರುವುದನ್ನಿಲ್ಲಿ ಮನಗಾಣಬಹುದು. ಇಲ್ಲಿ ಅಕ್ಕ ಉಪಮೆಗಳನ್ನು ನೀಡುತ್ತಾ ಯಾವುದೋ ಸ್ವಪ್ನಲೋಕದಲ್ಲಿ ಸಂಚರಿಸುತ್ತಿರುವಳಂತೆ ಕಾಣಬರುತ್ತಾಳೆ. ಗಂಡನಾಗುವನ ಬಗೆಗೆ ತಳೆದಿರುವ ಭಿನ್ನವಾದ ಭಾವನೆಯನ್ನು ಈ ವಚನ ಕಟ್ಟಿಕೊಡುತ್ತದೆ.

ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ
ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು
ನಮ್ಮವರೆನ್ನ ಮದುವೆಯ ಮಾಡಿದರು
ಕಂಕಣ (ಕೈದಾರಗಟ್ಟಿ) ಸ್ಥಿರ ಸೀಸೆಯ ನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು॥ [9]

ಲೌಕಿಕದ ವಿವಾಹವೆಂಬ ಕಟ್ಟುಪಾಡಿನಿಂದ ಮುಕ್ತಳಾಗುವ ತೀವ್ರತೆಯನ್ನುಳ್ಳ ಅಕ್ಕ ಅಮೂರ್ತನೆಲೆಯಲ್ಲಿ ವೈಭವವಾಗಿ ತನ್ನ ಮದುವೆಯ ಮಾಡಿದರು ಎನ್ನುತ್ತಾ ಚೆನ್ನಮಲ್ಲಿಕಾರ್ಜುನನೇ ಎನ್ನ ಗಂಡನೆಂಬ ದೃಢ ನಿರ್ಧಾರವನ್ನು ವ್ಯಕ್ತಪಡಿಸಿದ್ದಾಳೆ.

ಅಕ್ಕನ ಅಲೌಕಿಕ ಸೌಂದರ್ಯ ಹಾಗೂ ವಿರಕ್ತಿಯ ಭಾವವೆರಡೂ ಆಶ್ಚರ್ಯತರುವಂತಹುದು. ಹೊಸ ಬಗೆಯಲ್ಲಿ ತನ್ನ ಸುತ್ತಲ ವಾತಾವರಣವನ್ನು ರೂಪಿಸಿಕೊಳ್ಳಲು ನಡೆಸಿರುವ ಪ್ರಯತ್ನವನ್ನಿಲ್ಲಿ ಕಾಣಬಹುದು.

ಮಂಗಳವೇ ಮಜ್ಜನವೆನಗೆ
ವಿಭೂತಿಯೇ ಒಳಗುಂದದರಿಸಿನವೆನಗೆ
ದಿಗಂಬರವೇ ದಿವ್ಯಾಂಬರವೆನಗೆ
ಶಿವಪಾದರೇಣುವೇ ಅನುಲೇಪನವೆನಗೆ
ರುದ್ರಾಕ್ಷಿಯೇ ಮೈದೊಡುಗೆಯೆನಗೆ
ಶರಣದ ಪಾದಂಗಳೇ ತೊಂಡಿಲ ಬಾಸಿಗವೆನಗೆ
ಚೆನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ
ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ
ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವ? [10]

ಲೌಕಿಕ ದೃಷ್ಟಿಯಿಂದಾಗುವ ಮದುವೆ ಅಕ್ಕನದಲ್ಲ. ಚೆನ್ನಮಲ್ಲಿಕಾರ್ಜುನ ಪತಿಯಾದ ಬಳಿಕ ಯಾವುದರ ಹಂಗೂ ಅವಳಗಿದ್ದಂತೆ ಕಾಣುವುದಿಲ್ಲ. ವಿಭೂತಿ, ದಿಗಂಬರತೆ, ರುದ್ರಾಕ್ಷಿಯೇ ಆಭರಣವಾಗಿ ಶರಣರ ಪಾದವು ಅಕ್ಕನಿಗೆ ಶೃಂಗಾರದ ಪ್ರತಿಮೆಯಾಗಿದೆ. ಚೆನ್ನಮಲ್ಲಿಕಾರ್ಜುನ ಗಂಡನಾದ ಬಳಿಕ ಬೇರೆ ಶೃಂಗಾರ ಬೇಕಿಲ್ಲವೆಂದಿರುವಲ್ಲಿ ಅಲೌಕಿಕ ಪತಿಗಾಗಿ ಪತಿವ್ರತೆಯಾದವಳಂತೆ ಕಂಡು ಬರುತ್ತಾಳೆ. ಚಿತ್ತಚಾಂಚಲ್ಯದಿಂದ ಒಮ್ಮೊಮ್ಮೆ ಒಂದೊಂದು ತೆರನಾದ ಅನುಭವವನ್ನು ತಳೆದಿದ್ದಾಳೆ.

ಸಾವಿಲ್ಲದ ಸಹಜಂಗೆ ರೂಹಿಲ್ಲದ ಚೆಲುವಂಗೆ
ಭವವಿಲ್ಲದ ಅಭವಂಗೆ, ಭಯವಿಲ್ಲದ ನಿರ್ಭಯ ಚೆಲುವಂಗೆ
ನಾನೊಲಿದೆನಯ್ಯಾ ಚೆನ್ನಮಲ್ಲಿಕಾರ್ಜುನ ಗಂಡನೆನಗೆ
ಮಿಕ್ಕನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ॥ [11]

ಅಕ್ಕ ಹುಟ್ಟುಸಾವಿಲ್ಲದ, ರೂಪಿಲ್ಲದ, ಭಯವಿಲ್ಲದ, ಚೆಲುವನಾದ ಚೆನ್ನಮಲ್ಲಿಕಾರ್ಜುನ ತನ್ನ ಗಂಡನೆಂದು ಮಿಕ್ಕ ಲೋಕದ ಗಂಡರಿಗೂ ಎನಗೂ ಯಾವುದೇ ಸಂಬಂಧವಿಲ್ಲವೆಂದು ಲೌಕಿಕ ಪತಿಯ ರೂಪ ಲಾವಣ್ಯವನ್ನು ಅಲ್ಲಗಳೆದಿದ್ದಾಳೆ. ಈ ಬಗೆಯ ದಿಟ್ಟ ನಿಲುವು ಆ ಕಾಲದ ಕಟ್ಟಳೆಯ ಹಿನ್ನೆಲೆಯಲ್ಲಿ ಹೆಣ್ಣೊಬ್ಬಳು ಪಡೆದ ಅಸಾಧಾರಣ ಅಂತಃಶಕ್ತಿಯನ್ನು ಸಾದರಪಡಿಸುತ್ತದೆ.

### ಆಯ್ದಕ್ಕಿ ಲಕ್ಕಮ್ಮ

ವಚನಕಾರರು ಸಂಸಾರ ನೌಕೆಯಲ್ಲಿ ಇಬ್ಬರೂ ಸಮಾನರು ಹಾಗೂ ಸಮಾನ ಜವಾಬ್ದಾರಿ ಉಳ್ಳವರೆಂದು ಸಂಸಾರದಲ್ಲಿದ್ದ ಸಮಾಜದ ಒಳಿತಾಗಿ ಹೋರಾಡುವರಾಗಿದ್ದರು. ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎನ್ನುವ ಮಾತಿನಂತೆ ಲಕ್ಕಮ್ಮ ಪತಿಯ ಕಾಯಕವನ್ನೇ ಕೈಕೊಂಡು ಬಾಳಿದಳು ಲಕ್ಕಮ್ಮ ಪತಿಯ ಕಾರ್ಯದಲ್ಲಿ ಮಾತ್ರ ಪಾಲುದಾರಳಾಗದೆ, ಪತಿ ತಪ್ಪು ನಡೆದಾಗ ತಿದ್ದುವ ಮಾರ್ಗದರ್ಶಕಳಂತೆ ಕಾಣಬರುತ್ತಾರೆ. ಹೀಗೆ ಆತ್ಮವಿಶ್ವಾಸವನ್ನು ಹೊಂದಿದ ಹೆಂಗಸರು ಪುರಷರಿಗಿಂತ ಮಿಗಿಲಾಗಿ ಕಾಣುವರು.

ಆವ ಬೀಜವು ಬೀಳವಲ್ಲಿ ಮೊಳೆ ಮುಖ ಹಿಂಚು ಮುಂಚುಂಟೆ?
ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ?
ಮೂಲನಷ್ಟವಾದಲ್ಲಿ ಅಂಕುರ ನಿಂದಿತ್ತು
ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೇ?[12]

ಇಲ್ಲಿ ಲಕ್ಕಮ್ಮ ಸಂಸಾರದ ಬಗೆಗೆ ಹಾಗೂ ತನ್ನ ಪತಿಯೊಂದಿಗೆ ಮಾಡುವ ಕೆಲಸದಲ್ಲಿ ಸಂಪೂರ್ಣ ಸಹಕಾರ ನೀಡುವಳಂತೆ ತೋರಿದರೂ, ಇಬ್ಬರೂ ಸೇರಿ ಜ್ಞಾನ ಸಂಪಾದನೆ ಮಾಡಬೇಕೆಂದು, ಇನ್ನು ಮುಂದೆ ತನ್ನ ಸಕಲ ವಿಚಾರಗಳಲ್ಲೂ ಪತಿಯಾದವನು ಸಹಕರಿಸಿ, ನೀನು-ನಾನು ಎಂದು ಭೇದವ ಮಾಡದೆ ಬೆರೆಯಬೇಕೆಂದು, ಆಗ್ರಹಪೂರ್ವಕವಾಗಿ ಹೇಳುತ್ತಾಳೆ. ಹೀಗೆ ಹೇಳುವಲ್ಲಿ ಲಕ್ಕಮ್ಮ ವಿಚಾರವಂತಿಕೆಯ ಆಧುನಿಕ ಮಹಿಳೆಯಂತೆ ಕಾಣಬರುತ್ತಾಳೆ.

### ಕದಿರರೆಮ್ಮವ್ವೆ

ರೆಮ್ಮವ್ವ ರಾಟೆಯಿಂದ ನೂಲ ತೆಗೆಯುವ ಕಾಯಕ ಕೈಗೊಂಡು, ತನ್ನ ಅಂತರಂಗದಲ್ಲಿ ಶಿವಚೈತನ್ಯವನ್ನಿರಿಸಿಕೊಂಡವಳು. ಇವಳು ಅಕ್ಕಮಹಾದೇವಿಯೆಂತೆ ಲೌಕಿಕ ಪತಿಯನ್ನು ತಿರಸ್ಕರಿಸುವಳು. ಈ ತಿರಸ್ಕಾರದ ಸಂದರ್ಭದಲ್ಲಿ ಬಳಸಿರುವ ಭಾಷೆಯೂ ಇಲ್ಲಿ ಮುಖ್ಯವಾಗುತ್ತದೆ.

ಎಲ್ಲರ ಗಂಡಂದಿರು ಪರದಳ ವಿಭಾಡರು
ಎನ್ನಗಂಡ ಮನದಳ ವಿಭಾಡ,
ಎಲ್ಲರ ಗಂಡಂದಿರು ಗಜವೇಂಟೆಕಾರರು
ಎನ್ನ ಗಂಡ ಮನವೇಂಟೆಕಾರ.
ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು

ಎನ್ನ ಗಂಡತಾರದೆ ಇಕ್ಕಿಸಿಕೊಂಬ
ಎಲ್ಲರ ಗಂಡಂದಿರಿಗೆ ಮೂರು,
ಎನ್ನ ಗಂಡಂಗೆ ಅದೊಂದೆ
ಅದೊಂದೂ ಸಂದೇಹ, ಕದಿರರೆಮ್ಮೆಯೊಡೆಯ ಗುಮ್ಮೇಶ್ವರಾ॥[13]

ಇಲ್ಲಿ ಲೌಕಿಕ ಗಂಡನ ಮಿತಿಗಳನ್ನು ಸೂಚಿಸುವಲ್ಲಿಯೇ ಪತ್ನಿಯ ಬಯಕೆಯಂತೆ ಪತಿಯಾದವನಲ್ಲಿ ಇರಬೇಕಾದ ಗುಣಗಳನ್ನೂ ಸೂಕ್ಷ್ಮವಾಗಿ ಸೂಚಿಸುತ್ತಾಳೆ. ಹೀಗೆ ಗುಣಗಳನ್ನು ಸೂಚಿಸುವ ಸಂದರ್ಭದಲ್ಲಿ ಈ ಎಲ್ಲ ಗುಣಗಳಿಲ್ಲದ ಲೋಕದ ಗಂಡರ ನಿರಾಕರಣೆಯು ಸ್ಪಷ್ಟವಾಗಿ ಒಡಮೂಡಿದೆ.

**ಅಕ್ಕಮ್ಮ**

ಅಕ್ಕಮ್ಮ ನೇರವಾಗಿ ಕುಟುಂಬದ ಬಗೆಗೆ ಮಾತನಾಡದಿದ್ದರೂ, ಮದುವೆಯ ಸಂಭ್ರಮವನ್ನು ಕಂಡಿದ್ದಳು. ಇವಳಿಗೆ ಈ ಮದುವೆಯ ದಿನದ ಸಂಭ್ರಮದ ಘಳಿಗೆ ಮುಖ್ಯವಾಗದೆ, ಶಿವಶರಣರು ತಮ್ಮ ಮನೆಬಾಗಿಲಿಗೆ ಬಂದಂದು ಮದುವೆಯ ಸಂಭ್ರಮಕ್ಕಿಂತ ಹೆಚ್ಚು ಪುಳಕಿತಳಾಗುವೆ ಎಂದಿದ್ದಾಳೆ.

ಮದುವೆಯ ಬೆಸುಗೆಯಿಂದ ಪತಿ-ಪತ್ನಿಯರಲ್ಲಿ ಉಂಟಾಗುವ ಮೈಮನಸ್ಸುಗಳ ಸಮ್ಮಿಲನದ ಸಂತೋಷ ಹಾಗೂ ಅವರಿಬ್ಬರೂ ಕೈಗೊಳ್ಳುವ ನಂಬಿಕೆಯ ಸಂಕಲ್ಪಗಳು ಅಕ್ಕಮ್ಮನಿಗೆ ವಿವಾಹ ಬಾಂಧವ್ಯದಲ್ಲಿ ಮಾತ್ರವೇ ಕಂಡು ಬರದೆ ಭಕ್ತನಾದವನಿಗೆ ತನ್ನ ಶಿರವರಣರ ಕಂಡರೂ ಈ ಬಗೆಯ ರೋಮಾಂಚನ ಉಂಟಾಗುತ್ತದೆ ಎಂದಿದ್ದಾಳೆ. ನೋಡುವ ದೃಷ್ಟಿಕೋನ ಹಾಗೂ ಹೊಂದಿರುವ ಮನೋಭಾವದಿಂದ ಒಂದು ವಿಷಯವನ್ನು ನಿರ್ಣಯಿಸಲಾಗುವುದೆಂದು,ಭಕ್ತಿಯಿಂದ ಹಾಗೂ  ಶಿವಶರಣರ ಆಗಮನ ಮಾತ್ರದಿಂದಲೇ ಸಂತೋಷವನ್ನು ಹೊಂದಬಹುದದೆಂದು, ಸಂತೋಷವನ್ನು ಹೊಂದಲು ವಿವಾಹ ಬಂಧನ ಅನಿವಾರ್ಯವೇನಲ್ಲ ಎಂಬ ನಿಲುವನ್ನು ತಳೆದವಳಂತೆ ಕಾಣಬರುತ್ತಾಳೆ.

ಈ ನಿಟ್ಟಿನಲ್ಲಿನ ಅವಳ ವಚನದ ವರ್ಣನೆ ಹೀಗಿದೆ.

ಭಕ್ತರ ಮನಗೆ ಸತ್ಯಶರಣರು ಬಂದಲ್ಲಿಯೆ
ಮದುವೆಯ ಉತ್ಸಾಹಕ್ಕಿಂದ ವೆಗ್ಗಳವೆಂದು ಕಂಡು
ತನುಕರಗಿ, ಮನಬೆರಸಿ, ಕಂಗಳು ತುಂಬಿ ಪುಳಕಿತವಾಗಿ
ವಂಚನೆ ಸಂಕಲ್ಪವೆಂಬ ಶಂಕೆದೋರದೆ,
ನಿಶ್ಯಂಕನಾಗಿ ಮಾಡುವ ಭಕ್ತನ ವಂಕದ ಬಾಗಿಲೆ
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗ ಮಸ್ತಕ॥[14]

## ನೀಲಮ್ಮ

ನೀಲಮ್ಮನಲ್ಲಿ ಬಸವಭಕ್ತಿ ಬಸವ ನಿಷ್ಠೆಯ ವಚನಗಳೇ ಹೆಚ್ಚಾಗಿವೆ. ಹೆಣ್ಣಿಗಂಟಿದ್ದ ಕಾಯ ಹಾಗೂ ಕಾಮದ ಹಂಗನ್ನು ತೊರೆದು ತನ್ನನ್ನು ಮನಃಪೂರ್ವಕವಾಗಿ ಬಸವಣ್ಣನಿಗೆ ಅರ್ಪಿಸಿಕೊಂಡವಳಾಗಿದ್ದಾಳೆ. ಇವಳಲ್ಲಿ ದಾಂಪತ್ಯವು ಲೌಕಿಕ ನೆಲೆಯ ನಿರೀಕ್ಷೆಯನ್ನು ಮೀರಿ, ಆತ್ಮಸಂಬಂಧವಾಗಿ ವಿಕಾಸ ಹೊಂದಿದ ಶ್ರೇಷ್ಠ ಮಾದರಿಯೊಂದನ್ನು ಇವಳಲ್ಲಿ ಗುರುತಿಸಬಹುದು.

ಮಡದಿ ಎನಲಾಗದು ಬಸವಂಗೆ ಎನ್ನನು
ಪುರಷನೆನಲಾಗದು ಬಸವನ ಎನಗೆ
ಉಭಯದ ಕುಳವ ಹರದು ಬಸವಂಗೆ ಶಿಶುವಾನಾದೆನು
ಬಸವನೆನ್ನ ಶಿಶುವಾದನು
ಪ್ರಮಥರು ಪುರಾತರು ಸಾಕ್ಷಿಯಾಗಿ
ಸಂಗಯ್ಯನಿಕ್ಕಿದ ದಿಬ್ಬದ ಮೀರದೆ ಬಸವನೊಳಗಾನಡಗಿದೆ ॥[15]

ದಾಂಪತ್ಯದಲ್ಲಿ ಅರ್ಥವಂತಿಕೆಯ ಸಹಯೋಗವಿರಬೇಕೆನ್ನುವ ನೀಲಮ್ಮ, ಗಂಡ-ಹೆಂಡಿರೆಂಬ ಸಂಬಂಧದಕ್ಕೆ ಹೊಸ ನೆಲೆಗಟ್ಟನ್ನು ಕಟ್ಟಿಕೊಟ್ಟಿದ್ದಾಳೆ. ಲೌಕಿಕದ ಕಣ್ಣಲ್ಲಿ ಗಂಡ ಹೆಂಡಿರ ಬಗೆಗಿರುವ ಭಾವನೆಯಳಿದು ಒಬ್ಬರಿಗೊಬ್ಬರು ಶಿಶುವಾದೆವೆಂದು, ಕಾಮದವಾಸನೆಯಿಂದ ಮುಕ್ತರಾಗಿ ಪಾರಮಾರ್ಥಿಕ ನೆಲಯ ಆಧ್ಯಾತ್ಮ ಸಾಧನೆಯಲ್ಲಿ ತೊಡಗುವುದು ಅವರ ಮುಖ್ಯ ಉದ್ದೇಶವಾಗಿದೆ.

## ಹಡಪದಪ್ಪಣ್ಣ ಪುಣ್ಯಸ್ತ್ರೀ ಲಿಂಗಮ್ಮ

ಲಿಂಗಮ್ಮ ತಾನು ಕೈಗೊಂಡ ಗುರಿಯನ್ನು ತಲುಪಲು ಬಂದೊದಗುವ ಅಡೆತಡೆಗಳನ್ನು ತಾನೇ ನಿವಾರಿಸಿಕೊಳ್ಳುವುದಾಗಿ ಹೇಳುವ ಸಾಧಕಿಯಾಗಿ ಕಂಡು ಬರುತ್ತಾಳೆ. ಪಂಚೇಂದ್ರಿಯಗಳು ಹಾಗೂ ಅರಿಷಡ್ವರ್ಗಗಳ ಆಕರ್ಷಣೆಗೆ ಒಳಗಾಗದೆ ಅವುಗಳನ್ನು ಮೆಟ್ಟಿನಿಲ್ಲುವ ಛಲ ಹಾಗೂ ಆಧ್ಯಾತ್ಮ ಮಾರ್ಗದಲ್ಲಿ ಮುನ್ನಡೆಯುವ ನಿಷ್ಠೆಯನ್ನು ಲಿಂಗಮ್ಮ ಈ ವಚನದಲ್ಲಿ ಪ್ರತಿಪಾದಿಸುತ್ತಾಳೆ.

ನರರ ಬೇಡೆನು, ಸುರರ ಹಾಡೆನು, ಕರಣಂಗಳ ಹರಿಯ ಬಿಡೆನು
ಕಾಮನ ಬಲೆಗೆ ಸಿಲ್ಕೆನು, ಮರವೆಗೊಳಗಾಗೆನು
ಪ್ರಣವ ಪಂಚಾಕ್ಷರಿಯ ಜಪಿಸಿಹೆನೆಂದು
ತನು ಮರೆದು ನಿಜಮುಕ್ತಳಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನ ಬಸವಣ್ಣಾ ॥ [16]

ಸಮಾಜದಲ್ಲಿ ಹೆಣ್ಣನ್ನು ಎಲ್ಲಾ ಸಂದರ್ಭಗಳಲ್ಲೂ ಪರಾವಲಂಭಿಯಾಗಿ ಕಾಣುವಲ್ಲಿ ಲಿಂಗಮ್ಮ ಯಾರ ಹಾಗೂ ಯಾವುದರ ನೆರವು ತನಗೆ ಬೇಡವೆಂದಿದ್ದಾಳೆ. ಪರಂಪರಾಗತ ನಂಬಿಕೆಯಂತೆ ಬಾಲ್ಯದಲ್ಲಿ ತಂದೆ-ತಾಯಿಯರನ್ನು, ಯೌವ್ವನದಲ್ಲಿ ಪತಿಯನ್ನು, ಮುಪ್ಪಿನಲ್ಲಿ ಮಕ್ಕಳ ಆಸರೆಯಲ್ಲಿರಬೇಕಾದ್ದು ಹೆಣ್ಣಿನ ಲಕ್ಷಣ. ಆದರಿಲ್ಲಿ ಲಿಂಗಮ್ಮ ಈ ಎಲ್ಲ ನಂಬಿಕೆಗಳನ್ನು ಹುಸಿಗೊಳಿಸುವಂತೆ ನಡೆದು ತನ್ನ ದೇಹದ ಮಮಕಾರವನ್ನೂ ತೊರೆದು ನಿಜಮುಕ್ತಳಾದೆನೆನ್ನುತ್ತಾಳೆ.

### ಗೊಗ್ಗವ್ವೆ

ಗೊಗ್ಗವ್ವೆಯೂ ಸಹ ಲೌಕಿಕ ಜೀವನದ ಬಗೆಗೆ ವಿರಕ್ತಿ ಹೊಂದಿದವಳಾಗಿದ್ದಾಳೆ. ಶಿವಭಕ್ತೆಯಾದ ಇವಳಿಗೆ ಮದುವೆ ಅನಿವಾರ್ಯವಾಗಿ ಕಂಡುಬಂದಿಲ್ಲ. ಮದುವೆಯ ಹಂಗಿಲ್ಲದೆ ಸ್ವತಂತ್ರವಾಗಿರಲು ಬಯಸಿದವಳಂತೆ ಕಂಡು ಬರುತ್ತಾಳೆ. ಗಂಡು-ಹೆಣ್ಣು ಎಂದು ಗುರುತಿಸುವಲ್ಲಿ ದೈಹಿಕ ವ್ಯತ್ಯಾಸಗಳಿದ್ದರೂ ಅಂತಃಶಕ್ತಿಗೆ ಭೇದವಿಲ್ಲವೆಂಬ ವಿಶಾಲ ಮನೋಭಾವವುಳ್ಳವಳಾಗಿ ಕಂಡು ಬರುತ್ತಾಳೆ. ಗೊಗ್ಗವ್ವೆಯ ಈ ಬಗೆಯ ಸ್ವಚ್ಛಂದ ಸುಂದರ ಕಲ್ಪನೆ ವಾಸ್ತವವಾದರೆ ಸುಮಧುರ ಸುಖಿಃ ಕುಟುಂಬಗಳಿಂದ ಕೂಡಿದ ಸಮಾಜ ನಿರ್ಮಾಣವಾಗುತ್ತದೆ. ಹೆಣ್ಣು-ಗಂಡೆಂಬ ಭೇದವಳಿದರೆ ಸ್ತ್ರೀಗೆ ಸಾಕಷ್ಟು ಸ್ಥಾನ-ಮಾನ ಗೌರವಗಳು ಲಭ್ಯವಾಗುತ್ತವೆ. ಹೀಗೆ ಗೊಗ್ಗವ್ವೆಗೆ ಕಾಯದ ಮಮಕಾರಕ್ಕಿಂತ ಅಂತರಂಗದ ಅರಿವು ಮುಖ್ಯವಾಗಿದೆ. ಅವಳ ಈ ಮನೋಭಾವವನ್ನು ಈ ಕೆಳಗಿನ ವಚನ ಸುಂದರವಾಗಿ ನಿರೂಪಿಸುತ್ತದೆ.

ಮೊಲೆ ಮುಡಿ ಬಂದಡೆ ಹೆಣ್ಣೆಂಬರು
ಮೀಸೆಕಾಸೆ ಬಂದೆಡೆ ಗಂಡೆಂಬರು
ಈ ಉಭಯದ ಜ್ಞಾನ
ಹೆಣ್ಣೋ ಗಂಡೋ ನಾಸ್ತಿನಾಥಾ?[17]

### ಮೋಳಿಗೆ ಮಹಾದೇವಿ

ಮೋಳಿಗೆ ಮಹಾದೇವಿ ತನ್ನ ಪತಿಯೊಂದಿಗೆ ರಾಜತ್ವವನ್ನು ತೊರೆದು ಬಸವಣ್ಣನ ಮಹಿಮೆಗೊಳಗಾಗಿ ಲೌಕಿಕ ಬದುಕಿನ ಬಗೆಗೆ ವಿರಕ್ತಿ ಹೊಂದಿ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದವಳು.

ನಿಜವಾದ ಭಕ್ತಿಗೆ ಗಂಡು-ಹೆಣ್ಣೆಂಬ ಲೌಕಿಕ ತಾರತಮ್ಯವಿಲ್ಲವಾಗಿ, ಅಂಗ-ಲಿಂಗವೆರಡು ಏಕವೆನಿಸಿ, ಆತ್ಮ ಪರಮಾತ್ಮನಲ್ಲಿ ಲೀನವಾಗಬೇಕೆನ್ನುತ್ತಾಳೆ.

ಗಂಡನೊಂದಿಗೆ ಸರಿಸಮಾನವಾಗಿ ದುಡಿದು, ಆತನ ಒಡಗೂಡಿ ಎಲ್ಲ ಸಂದರ್ಭದಲ್ಲೂ ಬಾಳಿದ ಗೃಹಿಣಿಯಾಗಿ, ಲಿಂಗದ ಜೊತೆಗೆ ತಾನು ಕೊಂಡಿಯಾಗಿ ಸೇರಿದವಳೆನ್ನುತ್ತಾಳೆ. ಇಲ್ಲಿ ಮೋಳಿಗೆ ಮಹಾದೇವಿ ಸಂಸಾರವನ್ನು ಒಪ್ಪುತ್ತಲೇ ಅಲೌಕಿಕ ಸುಖವನ್ನು ಬಯಸುತ್ತಾಳೆ.

ಸಂಸಾರ ಸಂಗದಿಂದಲುದಯಿಸಿದ
ಸುಖವೆ ದುಃಖವೆಂದರಿಯದೆ
ಆ ಸುಖವನೆ ಮೆಚ್ಚಿನ ಭವದುಃಖವೆಂಬ
ಕ್ರೂರ ಜನ್ಮಚಕ್ರಕ್ಕೀಡಾಗಿ

ಅಲ್ಲಿ ತನ್ನ ಮರೆದು, ತನಗಿಲ್ಲದುದ ಭ್ರಮೆಯಿಂದ ತನ್ನದೆಂದು
ಅಂತಪ್ಪ ಭವಘೋರ ನರಕದೊಳಾಳುತ್ತ ಮುಳುಗಾಡುತಿಪ್ಪ
ಅಜ್ಞಾನಿ ಜೀವಿಗಳು ನಿಮ್ಮ ನೆತ್ತಬಲ್ಲರಯ್ಯಾ
ಎನ್ನಯ್ಯ ಪ್ರಿಯ ಇಮ್ಮಡಿನಿಃ ಕಳಂಕ ಮಲ್ಲಿಕಾರ್ಜುನಾ?[18]

ಸಂಸಾರದ ಸಂಗದಿಂದ ಸುಖವೆಂಬುದಿಲ್ಲ, ಸುಖವೆಂಬಂತೆ ಮೊದ ಮೊದಲು ತೋರಿ, ಕ್ಷಣಿಕ ಸುಖದಿಂದ ಮೈಮರೆಸಿ, ಭ್ರಮೆಯುಂಟುಮಾಡಿ ಕಾಡಿಸುವುದು ಎಂದಿದ್ದಾಳೆ. ಹೀಗೆ ಸಂಸಾರದಲ್ಲಿ ಮುಳುಗಿರುವ ಅಜ್ಞಾನಿಗಳ ಬಗೆಗೆ ಏನ ಹೇಳಲಿ ಎಂದು ಉದ್ಗಾರ ತೆಗೆದು, ಆ ಕಾರಣ ಜೀವನದ ಬಗೆಗೆ ನಿರ್ಲಿಪ್ತರಾಗಿ ಆತ್ಮಜ್ಞಾನವನ್ನು ಸಾಧಿಸಬೇಕೆಂದು ಅರಿವಿನ ಸಾಧನೆಯ ಮಾರ್ಗಕ್ಕೆ ಸಂಸಾರ ತೊಡಕಾಗದಂತೆ ನೋಡಿಕೊಳ್ಳಬೇಕೆನ್ನುತ್ತಾಳೆ. ಇದೇ ಸಂದರ್ಭದಲ್ಲಿ ಆ ಕಾಲದ ಸ್ತ್ರೀಯರ ಮೇಲೆ ಹೇರಲಾಗಿದ್ದ ಒತ್ತಡಗಳನ್ನು ಈ ವಚನ ನಿರ್ವಚಿಸುತ್ತದೆ.

### ಸತ್ಯಕ್ಕ

ಸತ್ಯಕ್ಕನಲ್ಲಿ ಮೊದಮೊದಲು ತನ್ನ ಹುಟ್ಟಿನ ಕಾರಣ ಹಾಗೂ ತನ್ನ ಕಾರ್ಯಕುರಿತು ತೊಳಲಾಟದಲ್ಲಿದ್ದಂತೆ, ತೋರುತ್ತದೆ.

ಶಿವನೊಲುಮೆಗೆ ಸಮರ್ಪಣಭಾವ ಅಗತ್ಯವೆಂದು ಪರಿಭಾವಿಸುವ ಸತ್ಯಕ್ಕ ಪರಮಾತ್ಮನನ್ನೇ ತನ್ನ ಪತಿಯೆಂದ ಗ್ರಹಿಸಿ, ಆತನನ್ನೇ ತನ್ನ ಸಕಲ ಗೊಂದಲ ಹಾಗೂ ಸಮಸ್ಯೆಗಳಿಗೆ, ಪರಿಹಾರವನ್ನು ಕೇಳುವ ಸಂದರ್ಭದಲ್ಲೇ ಉತ್ತರವನ್ನು ಕಂಡುಕೊಳ್ಳವಂತೆ ಕಾಣಬರುತ್ತದೆ. ನೀನು ಎನ್ನ ಬಿಟ್ಟರು ನಾನಿನ್ನು ಬಿಡೆನೆಂದು ಶಿವನಿಗೆ ಸವಾಲೊಡ್ಡುವ ವಿಚಾರವಂತೆಯಾಗಿ ಕಂಡುಬರುವುದನ್ನು ಈ ಕೆಳಗಿನ ವಚನದಲ್ಲಿ ಗುರುತಿಸಬಹುದು.

ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ?
ಏಕೆನ್ನ ಘೋರ ಸಂಸಾರದಲ್ಲಿರಿಸಿದೆ?
ಏಕೆನಗೆ ಕರುಣಿಸಲೊಲ್ಲದೆ ಕಾಡಿಹೆ?
ಏಕೆ ಹೇಳಾ ಎನ್ನ ಲಿಂಗವೆ? ಆನು ಮಾಡಿದ ತಪ್ಪೇನು?
ಸಾಕಲಾಗದೆಂದು ಅಕ್ಕೊತ್ತಿ ನೂಕಿದಡೆ
ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ?[19]

**ವಚನಕಾರ್ತಿಯರು ಕೌಟುಂಬಿಕ ಬದುಕಿನಿಂದ ಸಾಧನೆಯೆಡೆಗೆ ಸಾಗಿದ ಸಂದರ್ಭ**

ಶಿವಶರಣರು ವಚನ ಚಳುವಳಿಯ ಮೂಲಕ ತಳೆದ ಮಾನವತಾವಾದಿ ಧೋರಣೆ ಹಾಗೂ ಸ್ತ್ರೀಪರ ಆಶಯಗಳಿಂದ ಸ್ತ್ರೀಯರು ಜಾಗೃತಗೊಂಡು, ಆತ್ಮವಿಶ್ವಾಸವನ್ನು ಹೊಂದಿದರು.

ಕುಟುಂಬದ ಅಧೀನಕ್ಕೊಳಗಾಗಿ ಮೌಢ್ಯದಿಂದ ಕಾಲಸಾಗಿಸುತ್ತಿದ್ದ ಸ್ತ್ರೀಯು ಆಧ್ಯಾತ್ಮ ಆತ್ಮಸಾಧನೆ, ಅಭಿವ್ಯಕ್ತಿ ಸ್ವಾತಂತ್ರ್ಯವೆಂದು ಹೊಸಬಗೆಯಲ್ಲಿ ಚಿಂತಿಸುವಂತಾದಳು. ಅದೇ ಸಂದರ್ಭದಲ್ಲಿ ಲೋಕದ ಅವೈಜ್ಞಾನಿಕ, ಅವೈಚಾರಿಕ ಆಚರಣೆಗಳನ್ನು ವಿರೋಧಿಸಿ, ವಿಭಿನ್ನ ನೆಲೆಯಲ್ಲಿ ಅರ್ಥೈಸುವ ಸ್ವಂತಿಕೆಯನ್ನು ಬೆಳೆಸಿಕೊಂಡಳು.

ಹಲವು ವಚನಕಾರ್ತಿಯರು ಲೋಕದ ಹಾಗೂ ವಿವಾಹದಿಂದ ಉಂಟಾದ ಸಂಬಂಧವನ್ನು ಆಯ್ದುಕೊಂಡರೆ, ಲೌಕಿಕದ ಅತ್ತೆ-ಮಾವ, ತಂದೆ-ತಾಯಿ, ಪತಿಯೆಂಬುವರ, ಬಂಧನಗಳನ್ನು ಕೆಲ ವಚನಕಾರ್ತಿಯರು ತೊರೆದು ಲೌಕಿಕ ಕಾಮನೆ, ದೈಹಿಕ ಸೀಮೆ, ಮಾನಸಿಕ ಮಿತಿಗಳೆಲ್ಲವನ್ನೂ ಮೀರಿ ಆದ್ಯಾತ್ಮ ಸಾಧನೆಗೆ ಹೆಚ್ಚಿನ ಒತ್ತು ನೀಡಿದ್ದು ಆ ಕಾಲಘಟದ ಸ್ತ್ರೀಯರ ಅಪೂರ್ವಸಾಧನೆಯಾಗಿದೆ. ಈ ಬಗೆಯ ಸಂಕಲ್ಪದ ಹೋರಾಟವು ಆ ಹೊತ್ತಿಗಾಗಲೆ ಸ್ತ್ರೀಯರು ವಿಚಾರಶೀಲರಾಗಿದ್ದರೆಂಬುದಕ್ಕೆ ನಿದರ್ಶನವಾಗಿದೆ. ಈ ನಿಟ್ಟಿನಲ್ಲಿ ಕೌಟುಂಬಿಕ ನೆಲೆಯಲ್ಲಿ ಸ್ತ್ರೀಯರು ಹೊಂದಿದ ಹೊಸ ಬಗೆಯ ಅಸ್ತಿತ್ವ ಹಾಗೂ ತಳೆದ ವೈಚಾರಿಕ ನಿಲುವು ಇಂದಿನ ಆಧುನಿಕ ಮಹಿಳಾ ಜಗತ್ತಿಗೆ ಆದರ್ಶಪ್ರಾಯವಾಗಿದೆ.

## ಅಡಿಟಿಪ್ಪಣಿಗಳು

1. The Worlds greatest quotations
Compliled by Tryon Edwards. – P191
2 ಮಾರ್ಗ – 1 : ಡಾ ॥ ಎಂ. ಎಂ. ಕಲುಬುರ್ಗಿ – ಪುಟ 308
3 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು – ಪುಟ 48, ವಚನ –16
4 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು – ಪುಟ 70, ವಚನ –92
5 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು – ಪುಟ 142, ವಚನ –285
6 Britanica Ready Reference Encyclopedia Vol.4, Pg. 19
7 ಶಿವಶರಣೆಯರ ವಚನ ಸಂಪುಟ : ಸಂ. ಡಾ॥ ವೀರಣ್ಣರಾಜೂರ – ಪುಟ 36, ವಚನ –109
8 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು –ಪುಟ 58, ವಚನ –47
9 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು – ಪುಟ 65, ವಚನ –76
10 ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು – ಪುಟ 66, ವಚನ –78
11 ಅಕ್ಕನ ವಚನಗಳು : ಸಂ. ಡಾ ॥ ಎಲ್. ಬಸವರಾಜು – ಪುಟ 157, ವಚನ –327
12 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣ ರಾಜೂರ ಪುಟ 220, ವಚನ –5
13 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 240, ವಚನ –2
14 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 165, ವಚನ –97
15 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 309, ವಚನ –224
16 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 404, ವಚನ –85
17 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 247, ವಚನ –6
18 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 357, ವಚನ –62
19 ಶಿವಶರಣೆಯರ ವಚನ ಸಂಪುಟ : ಡಾ॥ ವೀರಣ್ಣರಾಜೂರ ಪುಟ 367, ವಚನ –9

## ಸಮಾರೋಪ

ಹನ್ನೆರಡನೆಯ ಶತಮಾನದ ವಚನ ಚಳುವಳಿಯು, ಅಂದಿನ ಚಿಂತನೆ, ಹಾಗೂ ಆ ಅವಧಿಯಲ್ಲಿ ಸ್ತ್ರೀಯರು ಮಾಡಿದ ಸಾಧನೆಗಳ ದೃಷ್ಟಿಯಿಂದ ತುಂಬಾ ಮುಖ್ಯವಾದುದು, ಮೊದಲಿಗೆ ಸ್ತ್ರೀ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದು ಶತಮಾನಗಳಿಂದ ಸ್ವಾತಂತ್ರ್ಯವು ಕೇವಲ ಪುರುಷನ ಹಕ್ಕು ಎಂಬಂತಿದ್ದ ಸ್ಥಾಪಿತ ಕಲ್ಪನೆಯನ್ನು ಹುಸಿಗೊಳಿಸಿದಳು. ಈ ನಿಟ್ಟಿನಲ್ಲಿ ಶಿವಶರಣರ ಸಮಗ್ರ ಬೆಂಬಲದಿಂದಾಗಿ ಆಕೆಯ ವ್ಯಕ್ತಿತ್ವಕ್ಕೆ ಒಂದು ಬಗೆಯ ಅನನ್ಯತೆ ಪ್ರಾಪ್ತವಾಯಿತು.

ಸಮಾಜ ಕಲ್ಯಾಣದ ಉದ್ದೇಶವನ್ನಿರಿಸಿಕೊಂಡು, ಸ್ವಂತಿಕೆಯಿಂದ ರೂಢಿಯ ನಂಬಿಕೆ ಹಾಗೂ ಶ್ರದ್ಧೆಗಳನ್ನು ಪ್ರಶ್ನಿಸಿ, ಗಟ್ಟಿಯಾಗಿ ನಿಂತು ತನ್ನನ್ನು, ತನ್ನತನವನ್ನು ಸಮರ್ಥಿಸಿಕೊಂಡು ಸಮಾಜದ ಕಟ್ಟುಪಾಡುಗಳ ವಿರುದ್ಧ ಸ್ತ್ರೀಯರು ಆ ಕಾಲಘಟ್ಟದಲ್ಲಿ ಹೋರಾಟ ನಡೆಸಿದ್ದು ವಿಶೇಷವೆನಿಸಿದೆ.

ವ್ಯಕ್ತಿ ಸ್ವಾತಂತ್ರ್ಯ, ಸ್ತ್ರೀ ಸಮಾನತೆ, ದಯೆ, ವಿಶ್ವಬಾಂಧವ್ಯದಂತಹ ಉದಾತ್ತ ತತ್ವಗಳನ್ನು ಸಾರಿದ ಕ್ರಾಂತಿಯ ಫಲವಾಗಿ ಎಲ್ಲರೂ ಸಮಾನರು, ಸಹೋದರರೆಂಬ ಭಾವನೆ ಆಕಾರ ಪಡೆಯಿತು. ಈ ಭಾವನೆಯ ಸಾಕ್ಷಾತ್ಕಾರವೆಂಬಂತೆ ನೂರಾರುಜನ ಮಹಿಳೆಯರಿಂದ ಸಾವಿರಾರು ವಚನಗಳು ಸೃಷ್ಟಿಯಾದವು.

ಸಮಾಜದ ಆತ್ಮೋದ್ಧಾರದ ಸಲುವಾಗಿ ಎಲ್ಲ ವರ್ಗದ ವಿವಿಧ ಸ್ತರಗಳಿಂದ ಬಂದ ಮಹಿಳೆಯರು ಒಂದುಗೂಡಿದರು. ಪುರುಷ ಪ್ರಧಾನತೆಯನ್ನು ಹೋಗಲಾಡಿಸಲು, ವರ್ಣಭೇದ ವರ್ಗಭೇದಗಳ ನಿವಾರಣೆಗೆ, ಸಮಾಜದ ವಿಷಮ ಪರಿಸ್ಥಿತಿಯ ನಿವಾರಣೆಗೆ ಸ್ತ್ರೀಯರು, ಒಂದಾಗಿ ಹೋರಾಟ ನಡೆಸಿದ್ದು ಮಹತ್ವವೆನಿಸಿದೆ.

ಈ ಪ್ರಬಂಧದಲ್ಲಿ ವಚನಕಾರ್ತಿಯರು ಈ ಹಿಂದೆ ಹೊಂದಿದ್ದ ಸಾಂಸ್ಕೃತಿಕ ಸ್ಥಾನಮಾನದ ಹಿನ್ನೆಲೆ ಹಾಗೂ ವಚನಚಳುವಳಿಯಲ್ಲಿ ತಾವು ಕಂಡುಕೊಂಡ ಹೊಸ ಬಗೆಯ ಅಸ್ತಿತ್ವವನ್ನು ಸಂಕ್ಷಿಪ್ತವಾಗಿ ತಿಳಿಯುವುದರೊಂದಿಗೆ ಈ ಕೆಳಗಿನ ವಿಚಾರಗಳಲ್ಲಿ ಅವರ ಪ್ರತಿರೋಧದ ಸ್ವರೂಪವನ್ನು ಮನಗಾಣಬಹುದು.

- ಲಿಂಗಭೇದ ಕಲ್ಪಿಸಿ ಸ್ತ್ರೀಯರಿಗೆ ದೈವತ್ವ ಸಾಧನೆ ಅಸಾಧ್ಯವೆಂದು ಭಾವಿಸಿ, ಶೋಷಣೆ ನಡೆಸುತ್ತಿದ್ದ ಸಂದರ್ಭದಲ್ಲಿ ಪ್ರಾಪಂಚಿಕ ಹಾಗೂ ಪಾರಮಾರ್ಥಿಕ ಸ್ತರದಲ್ಲಿ ಇಬ್ಬರು ಸಮಾನರೆಂದು ಭಕ್ತಿಗೆ ಅವಶ್ಯಕವಾದ ಲಿಂಗದೀಕ್ಷೆ, ವಿಭೂತಿಧಾರಣೆಗಳನ್ನು ಕೈಗೊಂಡು ಹೆಣ್ಣಿಗಿದ್ದ ಅಪವಿತ್ರ ಭಾವವನ್ನು ಶಾಶ್ವತವಾಗಿ ಕಳೆದುಕೊಳ್ಳುವ ಪ್ರಾಮಾಣಿಕ ಪ್ರಯತ್ನ ನಡೆಸಿದರು. ತಮ್ಮ ಅಂತರಂಗದ ಧ್ವನಿಗೆ ಮಾನ್ಯತೆ ನೀಡಿ ಅದಕ್ಕೆ ವಿರೋಧವಾಗಿ ವಚನಕಾರ್ತಿಯರು ನಡೆಯದಿರುವುದನ್ನು ಗುರುತಿಸಬಹುದು.

- ಕರ್ತವ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ಆರ್ಥಿಕವಾಗಿ ಸಬಲಳಾಗಿ ಸುಖೀರಾಜ್ಯ ಸ್ಥಾಪಿಸಲು ಹೋರಾಡಿದಳು. ವಚನಕಾರ್ತಿಯರು ಕಸುಬಿನಿಂದ ಒಂದುಗೂಡಿ, ಉಚ್ಚ-ನೀಚ ಭಾವನೆ ತೊಲಗಿಸಿ ಕಾಯಕದಲ್ಲಿ ಹೊಸಬಗೆಯ ಉದಾತ್ತ ಧ್ಯೇಯಗಳನ್ನು ಅಳವಡಿಸಿಕೊಂಡು, ಸಹಕಾರ ತತ್ವಕ್ಕೆ ಬದ್ಧರಾಗಿ ಬಾಳಿದರು. ಸಮಾಜದಲ್ಲಿ ಕೀಳಾಗಿ ಕಾಣುತ್ತಿದ್ದ ವೃತ್ತಿಗಳನ್ನು ಕೈಗೊಂಡು ವೃತ್ತಿ

ಗೌರರವನ್ನು ಸಲ್ಲಿಸಿದರು. ಮಾಡುವ ಕೆಲಸವನ್ನೆ ನಿಷ್ಠೆಯಿಂದ ಮಾಡುವುದಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದರು.

❖ ಸಮಾಜದ ಉದ್ಧಾರ ಮುಖ್ಯವಾಗಿದ್ದ ವಚನಕಾರ್ತಿಯರಿಗೆ ಸಮಾಜದ ಏಳಿಗೆಗೆ ಕುಂದನ್ನು ತರುವ ಸಂಗತಿಗಳ ಬಗೆಗೆ ತೀವ್ರವಿರೋಧ ವಿರುವುದನ್ನು ಗಮನಿಸಿರಬಹುದು. ಆ ಕಾಲದಲ್ಲಿ ಸಮಾಜದ ಹಾಸು ಹೊಕ್ಕಾಗಿದ್ದ ಅಂಧ ಆಚರಣೆ, ಜಾತಿವ್ಯವಸ್ಥೆ, ಅನೀತಿ, ಅಕ್ರಮಗಳನ್ನು ತೊಡೆದುಹಾಕುವಲ್ಲಿ ಕೈಕೊಂಡ ಕ್ರಮಗಳನ್ನು ಹಾಗೂ ಹಲವು ಸಾಮಾಜಿಕ ಕಟ್ಟುಪಾಡುಗಳಿಂದ ಮನಸ್ಸಿನಲ್ಲಿ ಉಂಟಾದ ತೀವ್ರ ಕೋಲಾಹಲವನ್ನು ಅವರ ವಚನಗಳ ಮೂಲಕ ತಿಳಿಯಬಹುದು. ಅವರ ಮಾತಿನ ಮೊನಚಿನಲ್ಲಿಯೇ ಸಮಾಜದ ಅನೀತಿಯ ಬಗೆಗಿನ ವಿರೋಧವು ಸ್ಪಷ್ಟವಾಗಿ ಒಡಮೂಡಿದೆ. ಹೀಗೆ ತಮ್ಮ ವಚನಗಳ ಮೂಲಕ ಜನರನ್ನು ಸ್ವತಂತ್ರವಾಗಿ ವಿಚಾರ ಮಾಡಲು ಹಚ್ಚಿದರು.

❖ ಧಾರ್ಮಿಕ ನೆಲೆಗಟ್ಟನ್ನು ವಚನಕಾರ್ತಿಯರು ವೈಜ್ಞಾನಿಕ ದೃಷ್ಟಿಯಿಂದ ನೋಡಿದರು. ಧರ್ಮದ ಮೇಲಾಟ ಇವರಿಗೆ ಮುಖ್ಯವಾಗದೆ ಅದರಲ್ಲಿನ ಒಳಿತುಕೆಡುಕನ್ನು ಮನಗಂಡು ಸನ್ನಡತೆಯಿಂದ ಪರಿಪೂರ್ಣರಾಗುವುದು ಮುಖ್ಯವಾಗಿದೆ. ಧರ್ಮವೆಂಬುದು ದಯೆಯಾಗಿ ಮಾರ್ಪಾಡಾಗಬೇಕೆನ್ನುವ ಶರಣ ತತ್ವಕ್ಕೆ ವಿರುದ್ಧವಾಗಿ ಧರ್ಮವು ಕಂಡುಬಂದರೆ ಅಂತಹ 'ಧರ್ಮ' ವಚನಕಾರ್ತಿಯರಿಗೆ ಲೇಶವೂ ಬೇಡವಾಗಿರುವುದನ್ನು ಗುರುತಿಸಬಹುದು. ಭಕ್ತಿ, ಜ್ಞಾನ, ವೈರಾಗ್ಯವೆನ್ನುವಲ್ಲಿಯೇ ವಿಚಾರಶೀಲತೆಯಿಂದ ನಡೆದರೆ ಮಾನವನ ಬಾಳು ಹಸನಾಗಬಲ್ಲದೆಂದು ತಿಳಿದಿರುವರಾಗಿ ಕಂಡು ಬರುತ್ತಾರೆ.

❖ ವಚನಕಾರ್ತಿಯರು ರಾಜಕೀಯದ ಬಗೆಗೆ ನಿರ್ಲಿಪ್ತರಾಗಿರುವಂತೆ ಕಂಡುಬಂದರೂ, ಕೆಲವು ಸಂದರ್ಭಗಳಲ್ಲಿ ರಾಜತ್ವದ ಬಗೆಗೆ ಮಾತನಾಡಿರುವುದನ್ನು ಕಲೆಹಾಕಿದಾಗ ತಿಳಿಯಬರುವ ಸಂಗತಿಯೆಂದರೆ– ವಚನಕಾರ್ತಿಯರು ಪ್ರಭುತ್ವಕ್ಕೂ ತಲೆಬಾಗದೆ, ಅವರಲ್ಲಿನ ತಪ್ಪುಗಳನ್ನು ತಿದ್ದುವಲ್ಲಿ ಹಿಂಜರಿಯದೆ ಕಾರ್ಯಪ್ರವೃತ್ತರವಾಗಿರುವುದು ತಿಳಿಯಬರುತ್ತದೆ. ಆದರೆ ಹೆಚ್ಚಾಗಿ ಸಾಮಾಜಿಕ ಸಂದರ್ಭಗಳ ಕುರಿತು ಮಾತನಾಡುವ ಸಂದರ್ಭದಲ್ಲೇ,ರಾಜಕೀಯದ ವಿಚಾರಗಳು ಸೂಕ್ಷ್ಮವಾಗಿ ಗೋಚರಿಸುತ್ತವೆ.

❖ ಕೌಟುಂಬಿಕ ಸಂದರ್ಭದಲ್ಲಿ ಈವರೆಗೆ ಮೌನಳಾಗಿದ್ದ ಹೆಣ್ಣು, ಎಷ್ಟರಮಟ್ಟಿಗೆ ತನ್ನ ಮನದಲ್ಲೇ ತನ್ನ ಅಸ್ತಿತ್ವವನ್ನು ಕುರಿತು ನೂರಾರು ಬಯಕೆಗಳನ್ನು ಹೊಂದಿದ್ದಳೆಂಬುದು ವಚನ ಚಳುವಳಿಯ ಮೂಲಕ ಅಭಿವ್ಯಕ್ತಗೊಂಡಿತು. ಆ ಬಯಕೆಗಳ ಈಡೇರಿಸಿಕೊಳ್ಳುವಂತೆ ಸ್ತ್ರೀ ಕುಟುಂಬದ ಬಾಹುಬಂಧನದಿಂದ ವಿಮುಕ್ತಿ ಪಡೆದು ದೇಹದ ಹಂಗನ್ನು ತೊರೆದು, ವಿವಾಹವೆಂಬ ಚೌಕಟ್ಟನ್ನು ಮೀರಿ, ಬೆರಗನ್ನುಂಟುಮಾಡಿದಳು. ತನ್ನ ಮೇಲೆ ಹೊರಿಸುತ್ತಿದ್ದ ನಿಬಂಧನೆ ಹಾಗೂ ಒತ್ತಾಯಗಳನ್ನೆಲ್ಲ ಬದಿಗೊತ್ತಿ, ಆಧ್ಯಾತ್ಮಸಾಧನೆಯನ್ನು ಗುರಿಯಾಗಿಸಿಕೊಂಡಳು. ಈ ಎಲ್ಲ ಆಲೋಚನೆಗಳನ್ನು ಅವರ ವಚನಗಳು ನಿರ್ವಚಿಸುತ್ತವೆ.

ವಚನಕಾರ್ತಿಯರು ಶ್ರೇಷ್ಠ ವಚನಗಳನ್ನು ರಚನೆಮಾಡಿ, ಹೆಣ್ಣು ಬಾಯಿಬಿಡಲು ಸಾಧ್ಯವಿರದಿದ್ದ ಸನ್ನಿವೇಷದಲ್ಲಿ ವಚನ ಚಳುವಳಿಯ ಕಾರಣದಿಂದ ವಿಶಿಷ್ಟ ರೀತಿಯಲ್ಲಿ ಚಿಂತಿಸಿ ತಮ್ಮ ಅನಿಸಿಕೆ ಗಳನ್ನು ಯಾವುದೇ ಭೀತಿಗೊಳಗಾಗದೆ ಹೇಳಲು

ಮುಂದಾದರು. ಹೀಗೆ ತಮಗಾದ ಅನುಭವವನ್ನು ಅಭಿವ್ಯಕ್ತಿಸುವಲ್ಲಿ ಅವರ ವಚನಗಳು ಕೆಲವು ಸಂದರ್ಭಗಳಲ್ಲಿ ಸ್ಪಷ್ಟ ನಿಲುವುಗಳನ್ನು ಎತ್ತಿ ಹೇಳುತ್ತವೆ. ಹಾಗೆ ಹೇಳುವಾಗ, ಭಕ್ತಿ, ಕಾಯಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಕೌಟುಂಬಿಕ ವಲಯಗಳಲ್ಲಿ, ಮೇಲ್ಮಟ್ಟದ ಬೆಳವಣಿಗೆಯನ್ನು ಆಶಿಸಿದ್ದಾರೆ. ಈ ಬಗೆಯ ಬೆಳವಣಿಗೆಯ ಈಡೇರಿಕೆಗಾಗಿ ಜನಸಾಮಾನ್ಯರಲ್ಲಿ ಜಾಗೃತಿ ಮೂಡುವುದು ಅವಶ್ಯಕವೆಂದು ಸಮಾಜದ ಹಾಗೂ ಮಾನವನ ಬೆಳವಣಿಗೆಯನ್ನು ಕುಂಠಿತ ಗೊಳಿಸುವ ನಕಾರಾತ್ಮಕ ಧೋರಣೆಗಳ ವಿರುದ್ಧ ಪ್ರಾಮಾಣಿಕ ಹೋರಾಟ ವನ್ನು ಮಾಡಿದರು. ಹೀಗೆ ಹೋರಾಟ ಮಾಡುವ ಸಂದರ್ಭದಲ್ಲಿ ಎದುರಾದ ಬದುಕಿನ ಆತಂಕಕಾರಿ ಕ್ಷಣಗಳನ್ನು ಅವರು ಎದುರಿಸಬೇಕಾಯಿತು. ವಚನಕಾರ್ತಿಯರು ತಮ್ಮ ಬದುಕಿಗೊಂದು ಅರ್ಥವನ್ನು, ಪರಿಶುದ್ಧತೆಯುನ್ನು ತರುವ ಸಂದರ್ಭದಲ್ಲಿ ಒದಗಿಬಂದ ಆತಂಕಗಳನ್ನು ಕ್ರಿಯಾತ್ಮಕವಾಗಿ ಎದುರಿಸುವ ಸಂದರ್ಭದಲ್ಲಿ ಅನೇಕ ಸಾಮಾಜಿಕ ವಿರೋಧಗಳಿಗೆ ಒಳಗಾದರು. ಸಾಮಾಜಿಕ ಒತ್ತಡ, ವೈಯಕ್ತಿಕ ಸಾಧನೆ, ಆಧ್ಯಾತ್ಮಿಕ ಸೆಳೆತ–ಈ ಎಲ್ಲದರ ಸಂದರ್ಭದಲ್ಲಿ ತಮ್ಮ ಗುರಿ ತಲುಪುವಲ್ಲಿ ಉಂಟಾದ ಅಡ್ಡಿ–ಆತಂಕಗಳಿಗೆ ಪ್ರತಿಭಟನೆಯನ್ನು ಸೂಚಿಸಿದ್ದಾರೆ. ಕೆಲವೊಮ್ಮೆ ಇದು ಎದ್ದು ಕಾಣುವ ಸ್ವರೂಪವನ್ನು ಪಡೆದುಕೊಂಡಿದ್ದರೆ ಮತ್ತೊಮ್ಮೆ ಇದು ಅತ್ಯಂತ ಸೂಕ್ಷ್ಮ ತರ ನೆಲೆಯದ್ದಾಗಿದೆ.

ಹೀಗೆ ಅವರ ಬದುಕಿನ ಅಪರೂಪವೆನಿಸುವ ಕ್ಷಣಗಳಲ್ಲಿನ ಅವರ ಅನುಭವ ಹಾಗು ಆ ಅನುಭವಗಳಿಗೆ ನೀಡಿದ ಪ್ರತಿಕ್ರಿಯೆಗಳನ್ನು ಒಟ್ಟಾರೆ ಸಂಕ್ಷಿಪ್ತವಾಗಿ ಈ ಸಂಪ್ರಬಂಧದಲ್ಲಿ ನೋಡಬಹುದಾಗಿದೆ.

## ಗ್ರಂಥಸೂಚಿ.


1. ಶಿವಶರಣೆಯರ ವಚನ ಸಂಪುಟ : ಸಂಪಾದಕರು: ಡಾ॥ ವೀರಣ್ಣ ರಾಜೂರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು
2001

2. ಅಕ್ಕನ ವಚನಗಳು: ಸಂಪಾದಕರು: ಡಾ॥ ಎಲ್. ಬಸವರಾಜು
ಪ್ರಕಾಶಕರು: ಗೀತಾ ಪುಸ್ತಕ
ಮೈಸೂರು
1997

3. ಸಾಹಿತ್ಯ ವಿಮರ್ಶೆ: ಸಂಪಾದಕರು: ಡಾ॥ ಕೆ. ಕೇಶವಶರ್ಮ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು
1997

4. ವಚನ ಚಳುವಳಿ: ಸಂಪಾದಕರು: ಪಿ.ವಿ. ನಾರಾಯಣ
ಶ್ರೀ ಸರ್ಪಭೂಷಣ ಮಠ
ಬೆಂಗಳೂರು
1981

5. ಮಾರ್ಗ1: ಸಂಪಾದಕರು ಡಾ॥ ಎಂ.ಎಂ. ಕಲಬುರ್ಗಿ
ಕರ್ನಾಟಕ ಬುಕ್ ಏಜೆನ್ಸಿ
ಬೆಂಗಳೂರು

6. ಕನ್ನಡ ಸಾಹಿತ್ಯ ಚರಿತ್ರೆ: ಸಂಪಾದಕ: ರಂ. ಶ್ರೀ ಮುಗುಳಿ.
ಉಷಾ ಸಾಹಿತ್ಯ ಮಾಲೆ
ಮೈಸೂರು
1984

7. ವಚನ ಸಾಹಿತ್ಯ: ಸಂಪಾದಕರು: ಡಾ॥ ಎಂ ಚಿದಾನಂದ ಮೂರ್ತಿ.
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು
2000

8. ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ: ಡಾ॥ ಬಸವರಾಜ ಕಲ್ಗುಡಿ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು
2001

9. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ: ಡಾ॥ ಎಚ್.ಎಸ್. ಶ್ರೀಮತಿ
ಕನ್ನಡ ವಿಶ್ವವಿದ್ಯಾಲಯ
ಹಂಪಿ
2006.

10. ಬಸವಣ್ಣನವರ ವಚನಗಳು: ಸಂಪಾದಕರು: ಡಾ॥ ಆರ್.ಸಿ. ಹಿರೇಮಠ
ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ
ಧಾರವಾಡ
1968

11. ಅಕ್ಕಮಹಾದೇವಿಯ ವಚನಗಳು ಸಾಂಸ್ಕೃತಿಕ ಮುಖಾಮುಖಿ: ಸಂಪಾದಕರು: ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ
ಹಂಪಿ
2005

12. ಸಮಗ್ರ ವಿಮರ್ಶೆ ಮೊದಲ ಸಂಪುಟ: ಸಂಪಾದಕರು: ಡಾ॥ ಗಿರಡ್ಡಿ ಗೋವಿಂದರಾಜ್
ಪ್ರಕಾಶಕರು: ಸಪ್ನ ಬುಕ್ ಹೌಸ್
ಬೆಂಗಳೂರು

13. ಸ್ತ್ರೀವಾದ ಡಾ॥ ಎಚ್.ಎಸ್ ಶ್ರೀಮತಿ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ
2004

14. ವೀರಶೈವ ಪಾರಿಭಾಷಿಕ ಪದಕೋಶ: ಸಂಪಾದಕರು: ಡಾ॥ ಎಸ್. ವಿದ್ಯಾಶಂಕರ
ಪ್ರಕಾಶಕರು: ಬಸವ ಸಮಿತಿ
ಬೆಂಗಳೂರು

